ದಲಿತರ ಬಂಡಾಯದ ಕೂಗು

# ಪಂಚಮ

ಸಂ: 2 ಸಂ: 6–7 ● ಪಾಕ್ಷಿಕ ● 40 ಪೈಸೆ ● 5 ಅಕ್ಟೋಬರ್ 1977

# ಪೋಲೀಸ್ ಕಸ್ಟಡಿಯಲ್ಲಿ ಅಮಾನುಷ ಚಿತ್ರಹಿಂಸೆ

[ವರದಿ : ವೆಂಕಟೇಶ್]

ಕೋಲಾರ ಜಿಲ್ಲೆ ಚಿಂತಾಮಣಿ ಟೌನ್ ಜಗಜೀವನರಾಂ ಕಾಲೋನಿಯ ಹರಿಜನ ಯುವಕ ನಾರಾಯಣಪ್ಪ ಎಂಬುವರನ್ನು ಸ್ಥಳೀಯ ಪೋಲೀಸರು ಪೋಲೀಸ್ ಠಾಣೆಯೊಳಗೆ ಸೇರಿಸಿಕೊಂಡು ಕ್ರೂರವಾಗಿ ಹೊಡೆದಿರುವುದಲ್ಲದೆ, ಆತನದೇನೂ ತಪ್ಪಿಲ್ಲ ಎಂದು ಹೇಳಲು ಬಂದ ಆತನ ತಂಗಿ ಮತ್ತು ಆಕೆಯ ಗಂಡನನ್ನೂ ಸೇರಿಸಿ ಮೂವರನ್ನೂ ಜೈಲಿನ ಕೋಣೆಗೆ ತಳ್ಳಿರುವ ಕೃತ್ಯ ನಡೆದಿದೆ. ಇದಕ್ಕೆ ಸಂಬಂಧಪಟ್ಟಂತೆ 22–9–77 ರಂದು ಅವರು ಕೋರ್ಟಿಗೆ ಹಾಜರಾಗಿದ್ದಾಗ ನಾರಾಯಣಪ್ಪ ತನ್ನ ನೋವಿನ ಕತೆ ಹೇಳಿಕೊಂಡ, ಅದು ಈ ರೀತಿ ಇದೆ :

(6ನೇ ಪುಟಕ್ಕೆ)

# ದಲಿತರ ಮನೆ ನುಗ್ಗಿ ಸವರ್ಣೀಯರ ಹಲ್ಲೆ

[ನಮ್ಮ ಪ್ರತಿನಿಧಿಯಿಂದ]

ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಹುರಳಿ ಹಳ್ಳಿಯಲ್ಲಿ ಕೂಳೆ ಸೊಪ್ಪಿನ ಜಮೀನಿಗೆ ಹರಿಜನರ ಎತ್ತೊಂದು ಕಾಲಾಕಿದ್ದೇ ಕಾರಣವಾಗಿ ಆ ಜಮೀನಿನ ಸವರ್ಣೀಯರು ಎತ್ತಿನ ವಾರಸುದಾರ ಹರಿಜನರ ಮನೆಗೆ ನುಗ್ಗಿ ಪಕೀರಪ್ಪ ಎಂಬ ಯುವಕನನ್ನು ದೊಣ್ಣೆ, ಕಲ್ಲುಗಳಿಂದ ಹೊಡೆದಿದ್ದು, ಆತನನ್ನು ಈಗ ಶಿವಮೊಗ್ಗ ಆಸ್ಪತ್ರೆಗೆ ಸೇರಿಸಲಾಗಿದೆ.

ದೌರ್ಜನ್ಯಕ್ಕೆ ಒಳಗಾದ ಹರಿಜನರ ಮತ್ತು ದೌರ್ಜನ್ಯ ನಡೆಸಿರುವ ಸವರ್ಣೀಯರ ಜಮೀನುಗಳು ಅಕ್ಕಪಕ್ಕದಲ್ಲಿದ್ದು ಸವರ್ಣೀಯರ ಜಮೀನಿಗೆ ಸೊಪ್ಪುಹಾಕಿದ್ದು ಆ ಸೊಪ್ಪನ್ನು ಕೊಯ್ದ ನಂತರ ಕೂಳೆಯಲ್ಲಿ ಹೊರಟಿದ್ದ ಚಿಗುರನ್ನು ತಿನ್ನಲು ಎತ್ತು ಅಲ್ಲಿಗೆ ಕಾಲಾಕಿದ್ದೇ ಈ ಘಟನೆಗೆ ಕಾರಣವಾಗಿದೆ.

ತಾ॥ 30–9–77ರಂದು ಬೆಳಿಗ್ಗೆ ಸವರ್ಣೀಯ ಅಣ್ಣ–ತಮ್ಮಂದಿರಾದ ಕೆಂಚಪ್ಪ, ಸಿದ್ದಪ್ಪ. ಇವರ ತಾಯಿ ಹಳದಮ್ಮ ಮತ್ತು ಇವರ ಸಂಬಂಧಿ ಹಾಲಸಿದ್ದಪ್ಪ ಪಕೀರಪ್ಪನ ಮನೆಗೆ ನುಗ್ಗಿ ಆತನಿಗೆ ದೊಣ್ಣೆ ಮತ್ತು ಕಲ್ಲುಗಳಿಂದ ಪ್ರಜ್ಞೆ ತಪ್ಪುವವರೆಗೆ ಹೊಡೆದಿದ್ದಲ್ಲದೆ ಆತನನ್ನು ಆಸ್ಪತ್ರೆಗೆ ತೆಗೆದುಕೊಂಡು ಹೋಗುವಾಗಲೂ ಅಡ್ಡಗಟ್ಟಿ ತಡೆಯಲು ಪ್ರಯತ್ನಿಸಿದರೆಂದು ಗೊತ್ತಾಗಿದೆ. ಈ ಘಟನೆ ನಡೆದ ಎರಡು ದಿನಗಳ ನಂತರ ಆ ದಿನ ಮನೆಗೆ ನುಗ್ಗಿ ಹೊಡೆದು ಹೋ. ನ ತಮ್ಮ ಟವಲ್‌ಗಳನ್ನು ಅಲ್ಲೇ ಮರೆತು ಹೋಗಿದ್ದು, ಅವುಗಳನ್ನು ಕಸಿದುಕೊಳ್ಳಲು ಮತ್ತೆ ಮನೆಗೆ ನುಗ್ಗಿ ಹಲ್ಲೆ ನಡೆಸಲು ಪ್ರಯತ್ನ ಪಟ್ಟರೆಂದೂ ತಿಳಿದುಬಂದಿದೆ.

ಹಲ್ಲೆಗೊಳಗಾದ ಪಕೀರಪ್ಪನನ್ನು Xರೇ ತೆಗೆದು ಪರೀಕ್ಷೆ ಮಾಡಿದ್ದು ಆತನ ಪಕ್ಕೆಲುಬು ಮುರಿದಿರುವುದು ತಿಳಿದುಬಂದಿದ್ದು– ಪೋಲೀಸ್ ಇನ್‌ಸ್ಪೆಕ್ಟರ್‌ರವರು ಹಲ್ಲೆ ಮಾಡಿರುವ ಸವರ್ಣೀಯರನ್ನು ಅರೆಸ್ಟ್ ಮಾಡಿ ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆ. ಈ ಸವರ್ಣೀಯರಿಗೆ ಸ್ಥಳೀಯ ಎಂ.ಎಲ್.ಎ. ಹೆಚ್.ಬಿ. ಕಾಡಸಿದ್ದಪ್ಪನವರ ಬೆಂಬಲವಿರುವುದರಿಂದ ಬಡ ಹರಿಜನರಿಗೆ ನ್ಯಾಯ ದೊರಕುವುದು ಅನುಮಾನವಾಗಿದೆ ●

# ದ ಲೇ ಕ ಯುವ ಸಂಘಟನೆಯ ದ್ವಿತೀಯ ಸಮ್ಮೇಳನ

ಶತಮಾನಗಳಿಂದ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ದಬ್ಬಾಳಿಕೆ - ಶೋಷಣೆಗೆ ಒಳಗಾಗಿರುವ ದಲಿತ ಜನಾಂಗ ಅರಿವು ಮೂಡಿದಂತೆಲ್ಲ ಸಂಘಟಿತರಾಗುತ್ತಾ, ತಮ್ಮ ಮೇಲಿನ ದಬ್ಬಾಳಿಕೆಯನ್ನು ಪ್ರತಿಭಟಿಸಲು ತೊಡಗಿದ್ದಾರೆ. ಇಂಥ ಒಂದು ಸಂಘಟನಾ ಶಕ್ತಿಯಾದ "ದಲಿತ ಲೇಖಕ, ಕಲಾವಿದ ಯುವ ಸಂಘಟನೆಯ ಪ್ರಥಮ ಸಮ್ಮೇಳನವು ಕಳೆದ ವರ್ಷ ಭದ್ರಾವತಿಯಲ್ಲಿ ನಡೆಯಿತು. ದ್ವಿತೀಯ ಸಮ್ಮೇಳನ 18-9-77 ರಂದು ಚಿಕ್ಕಮಂಗಳೂರಿನಲ್ಲಿ ನಡೆಯಿತು.

ಬೆಳಿಗ್ಗೆ ಊರಿನ ಮುಖ್ಯ ರಸ್ತೆಗಳಲ್ಲಿ ದಬ್ಬಾಳಿಕೆ, ದೌರ್ಜನ್ಯದ ವಿರುದ್ಧ ಪ್ರತಿಭಟನಾ ಮೆರವಣಿಗೆ ಆದನಂತರ ಪುರಭವನದ ಬಯಲು ರಂಗಮಂಟಪದ ಆವರಣದಲ್ಲಿ ಸಮ್ಮೇಳನವನ್ನು ಶ್ರೀ ಕೆ. ನ. ಶಿವತೀರ್ಥನ್ ಅವರ ಅಧ್ಯಕ್ಷತೆಯಲ್ಲಿ ಶ್ರೀ ವಿಜಯ ಪಾಟೀಲ್ ಉದ್ಘಾಟಿಸಿದರು "ದಲಿತರಮೇಲೆ ನಿರಂತರ ಸುಲಿಗೆ ನಡೆಸುತ್ತಿರುವ ಸವರ್ಣೀಯರಿಗೆ, ಜಮೀನ್ದಾರರಿಗೆ ಧಿಕ್ಕಾರ ಹೇಳುವುದರ ಮೂಲಕ ನಾನು ಈ ಸಮ್ಮೇಳನವನ್ನು ಉದ್ಘಾಟಿಸುತ್ತೇನೆ" ಎನ್ನುತ್ತಾ ಸಮ್ಮೇಳನ ಉದ್ಘಾಟಿಸಿದ ವಿಜಯ ಪಾಟೀಲ್ – "ದಲಿತರ ಬಗ್ಗೆ ಅವರ ಮೇಲೆ ನಡೆಯುವ ಕರಾಳ ದೌರ್ಜನ್ಯಗಳ ಬಗ್ಗೆ ವಿವಿಧ ರಾಜಕೀಯ ಪಕ್ಷಗಳು ಮಾತಾಡುವುದೆಲ್ಲಾ ತಮ್ಮ ತಮ್ಮ ಸ್ವಾರ್ಥಕ್ಕಾಗಿಯೇ ವಿನಹ ನಿಜವಾಗಿಯೂ ದಬ್ಬಾಳಿಕೆಯನ್ನು ತೊಡೆದು ಹಾಕುವ ಕಳಕಳಿಯಿಂದಲ್ಲ. ಯಾವುದೇ ಪಕ್ಷ ನಮ್ಮನ್ನು ಉದ್ಧಾರ ಮಾಡುತ್ತದೆಂದು ತಿಳಿದುಕೊಳ್ಳುವುದು ಭ್ರಮೆ. ನಮ್ಮ ಉದ್ಧಾರ ನಮ್ಮಿಂದ, ನಮ್ಮೆಲ್ಲರ ಒಗ್ಗಟ್ಟಿನಿಂದ ಮಾತ್ರಸಾಧ್ಯ ನಾವು ಎಲ್ಲಿಯ ತನಕ ಸಂಘಟಿತರಾಗುವುದಿಲ್ಲವೊ ಅಲ್ಲಿಯ ತನಕ ನಮ್ಮ ಮೇಲಿನ ಹಲ್ಲೆ ನಿಲ್ಲುವುದಿಲ್ಲ. ನಮ್ಮ ವಿಮೋಚನೆ ಆಗುವುದಿಲ್ಲ" ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಶಿವತೀರ್ಥನ್ ಅವರು "ನಾವು ನಮ್ಮ ಗುಡಿಸಲುಗಳಲ್ಲೇ ನಮ್ಮ ನಮ್ಮ ಮನಸ್ಸಿನಲ್ಲೇ ಇದ್ದರೆ ನಾವು ಹಾಗೇ ಕೊಳೆಯುತ್ತೇವೆ. ಅದು ಬಿಟ್ಟು ಹೀಗೆ ನಾವು ಬಯಲಿಗೆ ಬಂದು ಪ್ರತಿಭಟಿಸಬೇಕು. "ನನಗೆ ಗೊತ್ತಿದೆ ಪ್ಲಾಂಟರುಗಳ ದೌರ್ಜನ್ಯಕ್ಕೆ ನೀವೆಷ್ಟು ಒಳಗಾಗಿದ್ದೀರಿ ಎನ್ನುವುದು. ಆದರೆ ಒಬ್ಬೊಬ್ಬರೆ ಪ್ರತಿಭಟಿಸಲು ಸಾಧ್ಯವಿಲ್ಲ. ನಾವೆಲ್ಲಾ ಒಗ್ಗಟ್ಟಾಗಿ ನಮ್ಮ ಕಷ್ಟದಿಂದ - ನಮ್ಮನ್ನು ಸುಡುತ್ತಿರುವ ಕಾರ್ಪಣ್ಯದಿಂದ ಬಿಡುಗಡೆ ಹೊಂದಲು—ನಾವು ದ.ಡಿದ್ದನ್ನು ಕೂತು ಜಮೀನ್ದಾರರು — ಬಂಡವಾಳಶಾಹಿಗಳ ವಿರುದ್ಧ ಹೋರಾಡಬೇಕು' ಅಂದರು.

ನಂತರ ಅದೇ ವೇದಿಕೆಯಲ್ಲಿ ನಡೆದ ಕವಿಗೋಷ್ಠಿಯಲ್ಲಿ ಇಂದೂಧರ ಹೊನ್ನಾಪುರ, ರಾಮದೇವ ರಾಕೆ, ಜನಾರ್ಧನ, ಮರಿಸ್ವಾಮಿ, ನಾಗರಾಜ್, ರುದ್ರಸ್ವಾಮಿ, ಕೆ.

(6ನೇ ಪುಟಕ್ಕೆ)

ಚಿಕ್ಕಮಂಗಳೂರಿನಲ್ಲಿ ನಡೆದ ದಲಿತ ಲೇಖಕ, ಕಲಾವಿದ ಯುವ ಸಂಘಟನೆಯ ದ್ವಿತೀಯ ಸಮ್ಮೇಳನದ ಅಂಗವಾಗಿ - ಸಮ್ಮೇಳನ ಸುರುವಾಗುವ ಮೊದಲು ಊರಿನ ಮುಖ್ಯ ರಸ್ತೆಗಳಲ್ಲಿ ಬೃಹತ್ ಮೆರವಣಿಗೆ ನಡೆಯಿತು. ಮೆರವಣಿಗೆಯಲ್ಲಿ ನಾನಾ ಕಡೆಯಿಂದ ಸಮ್ಮೇಳನಕ್ಕೆ ಬಂದಿದ್ದ ಯುವಕರು, ವಿದ್ಯಾರ್ಥಿಗಳು, ಮಹಿಳೆಯರು, ಬಡ ಕೂಲಿಗಾರರು ಭಾಗವಹಿಸಿದ್ದರು.

ಮೆರವಣಿಗೆಯಲ್ಲಿ 'ಅಸ್ಪೃಶ್ಯತೆಗೆ ಧಿಕ್ಕಾರ" "ದಬ್ಬಾಳಿಕೆಗೆ ಧಿಕ್ಕಾರ' "ಅಂಬೇಡ್ಕರ್ ಜಿಂದಾಬಾದ್", "ಆಸ್ತಿಹಕ್ಕು ರದ್ದಾಗಲಿ", ದಲಿತ "ಕ್ರಾಂತಿ ಚಿರಾಯುವಾಗಲಿ'' ಎಂಬ ಘೋಷಣೆಗಳು ದಬ್ಬಾಳಿಕೆಯ ವಿರುದ್ಧ ಪ್ರತಿಭಟಿಸಿ ಬಾಯಿ ಬಿಚ್ಚಿದ ದಲಿತರ ನೋವು ತುಂಬಿದ ಗಂಟಲೊಳಗಿಂದ ಹೊಮ್ಮುತ್ತಿದ್ದವು

ಹಳ್ಳಿಗಾಡಿನಿಂದ ಬಂದಿದ್ದ ಜನ ಉತ್ಸಾಹದಿಂದ ಘೋಷಣೆ ಕೂಗುತ್ತಿದ್ದರು. ಯಾವಾಗಲೂ ಒಡೆಯನಎಸ್ಟೇಟಿನಲ್ಲೊ-ಜಮೀನಿನಲ್ಲೇ ಗೇಯುತ್ತಾ, ಬಡತನವನ್ನು ಹೆಗಲಿಗೆ ಕಟ್ಟಿಕೊಂಡೇ ಬದುಕುವ, ಸವರ್ಣೀಯ ಭೂ ಒಡೆಯರ ಭಯದ ನೆರಳಿನಲ್ಲಿ ಗಳಿಗೆ ಗಳಿಗೆಯನ್ನೂ ಆತಂಕದಿಂದ–ಭಯದಿಂದ-ಹತಾಶೆಯಿಂದ ಕಾಲನೂಕುವ ಜನತೆ ತಮ್ಮ ಜೀವಮಾನದಲ್ಲೇ ಮೊದಲಬಾರಿಗೆ "ಅಸ್ಪೃಶ್ಯತೆಗೆ ಧಿಕ್ಕಾರ" "ದಬ್ಬಾಳಿಕೆಗೆ ಧಿಕ್ಕಾರ" "ಹರಿಜನರ ಮೇಲೆ ಹಲ್ಲೆ ನಡೆಸುವ ಸವರ್ಣೀಯರಿಗೆಧಿಕ್ಕಾರ''ಎಂಬ ಘೋಷಣೆಗಳನ್ನು ಕೂಗುತ್ತಿದ್ದರು, ಹುಟ್ಟಿದಂದಿನಿಂದ ನೋವನ್ನುತಿನ್ನುತ್ತಾ ಸುಖ–ಸಂತೋಷ-ಸಂಭ್ರಮದ ಗಳಿಗೆಯನ್ನೇ ಕಾಣದೆ ಸದಾ ದುಃಖವನ್ನುಅಪ್ಪಿಕೊಂಡು ಬದುಕುವಜನತೆ ಒಮ್ಮೆ ಎಲ್ಲ ದಬ್ಬಾಳಿಕೆಯ ವಿರುದ್ಧ ದನಿ ಎತ್ತಿ ಪ್ರತಿಭಟಿಸಿದಾಗ ಅವರ ಹೊಟ್ಟೆಯೊಳಗೆ ಮನೆಮಾಡಿಕೊಂಡಿರುವನೋವು, ಯಾತನೆ.ಅಂತಕ್ಷಣದಲ್ಲಿ ಹೇಗೆಬಿಚ್ಚಿಕೊಂಡು ತನ್ನೆಲ್ಲ ರೋಷದೊಂದಿಗೆ ಪ್ರಕಟವಾಗುತ್ತದೆಎಂಬುದು ಕಂಡು ಬರುತ್ತಿತ್ತು.



ದಲಿತೋದ್ಧಾರದ ಜಪ ಮಾಡುತ್ತಲೇ ನುಂಗಿದ್ದು 1 ಲಕ್ಷ ರೂ.

# ಹುಣಸೂರಿನ ಹಾಸ್ಟೆಲಿನಲ್ಲಿ ದಬ್ಬಾಳಿಕೆ, ಶೋಷಣೆ

[ನಮ್ಮ ಪ್ರತಿನಿಧಿಯಿಂದ]

ಇಂದು ಆಗಸ್ಟ್ 13, ಹುಣಸೂರಿನ ರಸ್ತೆಗಳಲ್ಲಿ ಸ್ಥಳೀಯ ಪುಣ್ಯಭೂಮಿ ಹಾಸ್ಟಲಿನ ಸುಮಾರು 50 ಜನ ವಿದ್ಯಾರ್ಥಿಗಳು "ದಬ್ಬಾಳಿಕೆಗೆ ಧಿಕ್ಕಾರ", "ನಮಗೆ ನ್ಯಾಯ ಬೇಕು" ಇತ್ಯಾದಿ ಘೋಷಣೆಗಳನ್ನು ಕೂಗುತ್ತಾ ಮೆರವಣಿಗೆ ತೆಗೆದಿದ್ದರು. ಇದು ಪುಣ್ಯಭೂಮಿ ಹಾಸ್ಟಲಿನ ಹರಿಜನ ವಿದ್ಯಾರ್ಥಿಗಳು ತಮಗೆ ಆಗಿರುವ ಅನ್ಯಾಯಗಳ ವಿರುದ್ಧದ ಪ್ರತಿಭಟನೆಯಾಗಿತ್ತು. ಸುಡು ಬಿಸಿಲಿನಲ್ಲಿ ಪೋಸ್ಟರುಗಳನ್ನು ಹಿಡಿದು ಹಸಿದ ಯುವಕರು ನ್ಯಾಯ ಕೇಳಿ ಘೋಷಣೆಗಳನ್ನು ಕೂಗುತ್ತಾ ಹೋಗುತ್ತಿದ್ದ ವಾತಾವರಣ. ಇದು ತನಕ ಕತ್ತಲಲ್ಲೇ ನಡೆಯುತ್ತಿದ್ದ ಹಾಸ್ಟಲಿನ ಅವ್ಯವಹಾರಗಳನ್ನು ಹೊರ ಜಗತ್ತಿಗೆ ಸಾರುತ್ತಿತ್ತು. ಪ್ರತಿಭಟನೆಯ ಮೆರವಣಿಗೆ ಮುಖ್ಯ ಬೀದಿಗಳನ್ನೆಲ್ಲಾ ಸುತ್ತಿ ಎ.ಸಿ.ಯವರ ಆಫೀಸಿನ ಬಳಿ ಬಂತು. ಎ.ಸಿ. ಇರಲಿಲ್ಲ. ವಿದ್ಯಾರ್ಥಿಗಳೆಲ್ಲಾ ಅಲ್ಲೇ ಧರಣಿ ಕುಳಿತರು.

### ಹೊಟ್ಟೆಗೆ ಬದಲು ಕಿಸೆಗೆ ಹಣ

ಪುಣ್ಯಭೂಮಿ ಹಾಸ್ಟಲು ಮೂರು-ನಾಲ್ಕು ವರ್ಷಗಳಿಂದ ಹುಣಸೂರು ತಾಲ್ಲೂಕು ಕಾಂಗ್ರೆಸ್ ಸಂಚಾಲಕರಾದ ಎನ್. ಶ್ರೀನಿವಾಸ್‌ರ ಅಧ್ಯಕ್ಷಗಿರಿಯಲ್ಲಿ ನಡೆಯುತ್ತ ಬಂದಿದೆ. ಇವರು ಮುಖ್ಯಮಂತ್ರಿಯವರ ಬಾಯಿಗೆ ಬಾಯಿ ಹಾಕಿ ದಲಿತೋದ್ಧಾರದ ಜಪ ಮಾಡುತ್ತಾ, ಮೊದಲಿಗೆ ಹಾಸ್ಟಲು ತೆಗೆದಾಗ ಪರವಾಇಲ್ಲ ಅನ್ನಿಸಿತ್ತಾದರೂ ಕ್ರಮೇಣ ಹರಿಜನ ವಿದ್ಯಾರ್ಥಿಗಳಿಗೆ ಸರ್ಕಾರ ತಲಾ ತಿಂಗಳಿಗೆ ಕೊಡುವ 125 ರೂಗಳು ಅವರ ಹೊಟ್ಟೆಯ ಖರ್ಚಿಗೆ ಹೋಗುವ ಬದಲು ಶ್ರೀನಿವಾಸ್‌ರ ಕಿಸೆಗೆ ತುಂಬ ತೊಡಗಿದವು. ಅವಾಗಿನಿಂದ ಇಲ್ಲಿಯ ತನಕವೂ 125 ರೂ. ಗಳಿಗೆ ಸುಳ್ಳು ಲೆಖ್ಖ-ಪತ್ರ ತೋರಿಸಿ ತಲಾ ತಿಂಗಳಿಗೆ ಒಬ್ಬ ವಿದ್ಯಾರ್ಥಿಗೆ ಕನಿಷ್ಟ 70-75 ರೂ. ವೆಚ್ಚವಾಗುವಂತೆ ಕಚಡಾ ಊಟ ಕೊಡುತ್ತಾ ಬಂದಿರುವರು.

### ಹಾಕಿದ್ದು ತಿಂದುಕೊಂಡು ಬಿದ್ದಿರ್‍ರೋ

ಇಂಥ ವ್ಯವಸ್ಥೆಯನ್ನು ಇಲ್ಲಿಯ ವರೆಗೂ ಸಹಿಸಿಕೊಂಡು ಬಂದ ವಿದ್ಯಾರ್ಥಿಗಳಿಗೆ ಇನ್ನೂ ಸಹಿಸಲು ಸಾಧ್ಯವಾಗಲಿಲ್ಲ. ಮೈಸೂರಿನಂಥ ಊರಿನಲ್ಲಿ 125 ರೂ. ಗಳಿಗೆ ಉತ್ತಮವಾದ ಊಟ ಕೊಟ್ಟು, ಒಳ್ಳೆಯ ವಸತಿ ಸೌಕರ್ಯವೂ ಇದ್ದು ಇಲ್ಲಿ ತಮ್ಮ ಹಾಸ್ಟಲಿನ ಆಡಳಿತ ವರ್ಗವು ಹಣ ಲಪಟಾಯಿಸುತ್ತಿರುವುದು ವಿದ್ಯಾರ್ಥಿಗಳಿಗೆ ಸ್ಪಷ್ಟವಾಗತೊಡಗಿತು. ಇದನ್ನು ಪ್ರಸ್ತಾಪಿಸಿ ಹೀಗೇಕೆ ಎಂದು ಶ್ರೀನಿವಾಸ್‌ರನ್ನು ಕೆಲ ವಿದ್ಯಾರ್ಥಿಗಳು ಕೇಳಿದಾಗ ಅವರು ಉರಿದು ಬೀಳುತ್ತಾ ಹೀನಾ ಮಾನ ಬೈದು "ಹಾಕಿದ್ದು ತಿಂದುಕೊಂಡು ಬಿದ್ದಿರ್‍ರೋ, ಅದೆಲ್ಲ ಕೇಳಿದ್ರೆ ಹಾಸ್ಟಲಿಂದ ಹೊರಗೆ ಅಟ್ಟಬೇಕಾಗುತ್ತೆ" ಎಂದು ಆರ್ಭಟಿಸಿದರೆಂದು ಗೊತ್ತಾಗಿದೆ.

### ಅನ್ಯಾಯದ ವಿರುದ್ಧ ಪ್ರತಿಭಟನೆ

ಇಷ್ಟಾದರೂ ಅನ್ಯಾಯ ನಿಲ್ಲದೆ ನಡೆಯತೊಡಗಿತು. ವಿದ್ಯಾರ್ಥಿಗಳಲ್ಲಿ ಈ ಬಗ್ಗೆ ತಿಳುವಳಿಕೆ ಮೂಡಿದಂತೆಲ್ಲ ಪ್ರತಿಭಟನೆಗಳು ಆಗಾಗ್ಗೆ ನಡೆಯತೊಡಗಿದವು. ಅಂತೆಯೇ ದಿನೇ ದಿನೇ ಊಟದ ಮಟ್ಟವೂ ಇಳಿಯತೊಡಗಿತು. ಮತ್ತು ಇದರ ಜೊತೆಗೆ Establishment charges ಅಂತ 30 ರೂ ಗಳನ್ನು ವಸೂಲಿ ಮಾಡತೊಡಗಿದರು. ಇದರಿಂದ ಮತ್ತಷ್ಟು ಬೇಸರಗೊಂಡ ವಿದ್ಯಾರ್ಥಿಗಳು ಪ್ರತಿಭಟಿಸಿದರು. ಈ ಬಗ್ಗೆ ವಿದ್ಯಾರ್ಥಿಗಳೊಂದಿಗೆ ಮಾತಾಡಲು ಹಾಸ್ಟಲ್‌ನ ಅಧಿಕಾರ ವರ್ಗ ತಾರೀಕೊಂದನ್ನು ನಿಗದಿ ಪಡಿಸಿತು. ಆದರೆ ಅದಕ್ಕೆ ಎರಡು ದಿನ ಮುಂಚೆಯೇ ಶ್ರೀನಿವಾಸ್ ಸ್ಥಳೀಯ ಪ್ರಥಮ ದರ್ಜೆ ಕಾಲೇಜಿನ ಪ್ರಿನ್ಸಿಪಾಲ್ ಶಿವರುದ್ರಯ್ಯ ಹಾಗೂ ಹಾಸ್ಟಲ್ ವಾರ್ಡನ್ ಬಂದು ವಿದ್ಯಾರ್ಥಿಗಳನ್ನು ಬಾಯಿಗೆ ಬಂದಂತೆ ಬಯ್ದು, "ಗೊಂತರ್ ನನ್ಮಕ್ಕಳಾ, ನಿಮ್ಗೆ ಸಹಾಯ ಮಾಡೋದು ನಾಯಿ ಕಾಲಲ್ಲಿ ಮುಳ್ ತಗ್ದಂಗೆ" ಅಂದರೆಂತಲೂ ವಿದ್ಯಾರ್ಥಿಗಳು ಈ ಬಗ್ಗೆ ಸರ್ಕಾರಕ್ಕೆ ತಿಳಿಸುವುದಾಗಿ ಹೇಳಿದಾಗ "ಹೇಳಿ ಅದೇನ್ ತರ್‍ಕೊಳ್ತಿರೋ ತರ್‍ಕೊಳ್ರೋ ನಾವೂ ನೋಡ್ತೀವಿ" ಅನ್ನುತ್ತ ಹೊರಟು ಹೋದರೆಂದೂ ಮತ್ತು ಆವತ್ತಿನಿಂದಲೇ ಹಾಸ್ಟಲ್‌ನಲ್ಲಿ ಊಟ ನಿಲ್ಲಿಸಿದರೆಂದೂ ತಿಳಿದುಬಂದಿದೆ.

### ಎ.ಸಿ.ಯವರ ಸುಧಾರಣಾ ವೈಖರಿ

ಹಸಿದ ವಿದ್ಯಾರ್ಥಿಗಳು ಆ ದಿನ ಸಂಜೆ ಎ.ಸಿ.ಯವರನ್ನು ಕಂಡರು. ಆಗ ಹೊಟ್ಟೆ ತುಂಬ ಊಟ ಮಾಡಿ ಕುಳಿತಿದ್ದ ಎ.ಸಿ. ಸಾಹೇಬರು ಬಂದು ಕಾರಣ ಕೇಳಿದಾಗ ಹುಡುಗನೊಬ್ಬ ಮಾತಾಡತೊಡಗಿದ ಕೂಡಲೇ "ಲೇ ನಿನ್ನ ರಾಗ ಸರಿಯಿಲ್ಲ ಸುಮ್ನಿರು" ಅದೇನ್ ಅದು ಗೊರ್ ಗೊರ್ ಸದ್ದು, ಅಂದು ಬೇರೊಬ್ಬನಿಗೆ ಮಾತನಾಡಲು ಹೇಳಿದಾಗ ಆತ ಹಾಸ್ಟಲಿನಲ್ಲಿ ಊಟ ನಿಲ್ಲಿಸಿದ್ದಾರೆ ಎಂದು ತಿಳಿಸಿದಾಗ, ಅವರು "ಹಸ್ಕೊಂಡಿದ್ರೆ ಏನ್ ಸಾಯೋದಿಲ್ಲ. ಬೆಳಗ್ಗೆ ಬನ್ನಿ ನೋಡುವ" ಅಂದರು. ಬೆಳಿಗ್ಗೆ ಎ.ಸಿ ಯವರು ಎರಡು ದಿನಕ್ಕಾಗುವಷ್ಟು ದಿನಸಿ ಕೊಡಿಸಿದ್ದು, ಮತ್ತೆ ಎರಡು ದಿನದ ನಂತರ ಮತ್ತೆ ಯಥಾಪ್ರಕಾರ ಊಟ ನಿಂತದ್ದಾಗಿ ಈ ಬಗ್ಗೆ ಯಾರಿಂದಲೂ ನ್ಯಾಯ ಸಿಗದೆ ಮುಖ್ಯಮಂತ್ರಿಯವರನು ಕಂಡರೂ ಅವರೂ ಇದರ ಬಗ್ಗೆ ಉಪೇಕ್ಷೆ ಮಾಡಿದರೆಂದು ಗೊತ್ತಾಗಿದೆ.

### ಪೋಲೀಸ್‌ಗೆ ದೂರು

ಈ ನಡುವೆ ಹಾಸ್ಟಲಿನ ವಾರ್ಡನ್ ಅವರು ಕಿಟಕಿ ಬಾಗಿಲುಗಳೇ ಸರಿಯಾಗಿಲ್ಲದ ಹಾಸ್ಟಲಿನ ಕಿಟಕಿ ಬಾಗಿಲುಗಳನ್ನು ವಿದ್ಯಾರ್ಥಿಗಳು ಮುರಿದಿದ್ದಾರೆ ಎಂದು ಪೋಲೀಸರಿಗೆ ದೂರು ಕೊಟ್ಟರು. ಪೋಲೀಸರು ಬಂದು ನಾಲ್ಕಾರು ಜನ ವಿದ್ಯಾರ್ಥಿಗಳನ್ನು ಕರೆದೊಯ್ದು, ಹಾಸ್ಟಲಿನ ಕಿಟಕಿ ಬಾಗಿಲುಗಳನ್ನು ಖುದ್ದು ಪರಿಶೀಲಿಸಿದರು. ಆದರೆ ಆ ಯಾವ ಕಿಟಕಿ ಬಾಗಿಲುಗಳಿಗೂ ಯಾವುದೇ ರೀತಿಯ ಜಖಂ ಸಹ ಆಗಿರಲಿಲ್ಲ. ವಾರ್ಡನ್ ಸಾಹೇಬರು ಈ

(4 ನೇ ಪುಟನೋಡಿ)

## ಪತ್ರಗಳು

# ಹರಿಜನರು ಮತ್ತು ವರ್ಗ ಹೋರಾಟ

ಮಾನ್ಯರೇ,

ಇತ್ತೀಚಿನ ದಿನಗಳಲ್ಲಿ ಹರಿಜನರ ಮೇಲಿನ ಅತ್ಯಾಚಾರದ ಬಗ್ಗೆ ತೀವ್ರ ಕಳಕಳಿ ಇರುವ ಹೇಳಿಕೆಗಳು ಒಂದಾದರ ಮೇಲೊಂದರಂತೆ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ. ಹರಿಜನ ಉದ್ಧಾರದ ಬಗ್ಗೆ ಅತೀ ಹೊಸ ಮಾರ್ಗವನ್ನು ಸೂಚಿಸಿದವರು ಜಯಪ್ರಕಾಶ್‌ನಾರಾಯಣ್. "ಹರಿಜನರನ್ನು ವರ್ಗದ ಆಧಾರದ ಮೇಲೆ ಸಂಘಟಿಸುವುದನ್ನು" ನಾನು ಇಷ್ಟಪಡುತ್ತಿರಲಿಲ್ಲ. ಈಗ ನಾನು ವರ್ಗ ಸಂಘಟನೆಯನ್ನು ಒಪ್ಪುತ್ತೇನೆ. ವರ್ಗ ಹೋರಾಟ ಅನಿವಾರ್ಯ. ಸರ್ವೋದಯ ಚಳವಳಿ (ಪರಿವರ್ತನೆ ಆಧರಿಸಿದುದು) ಒಂದು ಮಟ್ಟದ ವರೆಗೆ ಹೋಯಿತು ನಂತರ ಅದು ಸೋತಿತು. (Indian Express Aug ) ಕರ್ನಾಟಕದ ಹರಿಜನ ಮುಂದಾಳು ಒಬ್ಬರು ಜೆ.ಪಿ. ಯವರು ವರ್ಗ ಹೋರಾಟದ ನಾಯಕತ್ವವನ್ನು ವಹಿಸಬೇಕೆಂದು ಹೇಳಿದರು. ದಲಿತರ ಮೇಲಿನ ಅತ್ಯಾಚಾರ ಈ ಹಿಂದೆಯೂ ನಡೆಯುತ್ತಿತ್ತು. ಇನ್ನೂ ನಡೆಯುತ್ತಿದೆ. ಕಿಲ್ವಮಣಿ, ಬೆಲ್ಚಿ ಘಟನೆಗಳು ಪ್ರಚಾರ ಪಡೆಯಲು ಕಾರಣ ಎಲ್ಲಾ ಅಧಿಕಾರಕ್ಕೇರುವ ರಾಜಕೀಯ ಗುರಿಯುಳ್ಳ (ಬಲ ಮತ್ತು ಎಡ ಪಕ್ಷಗಳೂ ಸಹ) ಸಂಸ್ಥೆಗಳು ಇದ್ದಕ್ಕಿದ್ದಂತೆ ದಲಿತರ ಬಗ್ಗೆ ಕಣ್ಣೀರು ಸುರಿಸಿ ಇನ್ನೂ ಹೆಚ್ಚು ಓಟು ಸಂಪಾದಿಸಲು ಮಾಡುವ ಯತ್ನಗಳೇ.

ವರ್ಗ ಹೋರಾಟದ ಮಾತುಗಳೂ ಈ ಹಿನ್ನೆಲೆಯಲ್ಲಿ ಆಧಾರಿತವಾಗಿವೆ. 30 ವರ್ಷಗಳಾದರೂ ದಲಿತರು ಸರ್ಕಾರಿ ಸವಲತ್ತುಗಳಿಂದ ಬೆಂಬಲಿಸಲ್ಪಟ್ಟರೂ, ದಲಿತರು ಏಕೆ ಸಂಘಟಣೆಗೊಳ್ಳಲಿಲ್ಲ? ದಲಿತರಲ್ಲಿ ಮುಂದೆ ಬಂದ ವಿದ್ಯಾವಂತ ಪುಡಾರಿ ವರ್ಗ ಏಕೆ ವರ್ಗ ಸಂಘಟಣೆಗೆ ಪ್ರಯತ್ನಿಸಲಿಲ್ಲ? ಈ ಸಮಸ್ಯೆಗೆ ಉತ್ತರ ಹರಿಜನರೆಂದು ಹೆಸರುಕೊಟ್ಟು 18% ಮೀಸಲಾತಿ ಹರಿಜನರನ್ನು ಒಡೆಯುವ ದೊಡ್ಡ ಕುತಂತ್ರವನ್ನು ಈ ದೇಶದ 30 ವರ್ಷಗಳ ರಾಜಕೀಯ ಇತಿಹಾಸವನ್ನು ಗಮನಿಸಿದಾಗ ಸ್ಪಷ್ಟವಾಗುವುದು. ಹರಿಜನರು ವರ್ಗವಾಗಿ ಅಥವಾ ಜಾತಿಯಾಗಿಯೂ ಒಂದೇ ಆಗಿದ್ದಾರೆ. ಕಳೆದ 30 ವರ್ಷಗಳಲ್ಲಿ 18% ಜನರ ವರ್ಗ ಹೆಚ್ಚುಕಮ್ಮಿ ಈ ದೇಶದ ಅಧಿಕಾರಶಾಹಿ ಮತ್ತು ರಾಜಕೀಯದಲ್ಲಿ ಪ್ರಾತಿನಿಧ್ಯ ಕೊಡಲ್ಪಟ್ಟಿದ್ದಾರೆ. ಈ ಜನ ಏಕೆ ತಮ್ಮ ಹಿಂದೆ ಉಳಿದ ತಮ್ಮವರನ್ನು ಸಂಘಟಿಸಲಿಲ್ಲ, ಯಾವುದೇ ಶ್ರೀಮಂತ ವರ್ಗದ ಆಳ್ವಿಕೆಯಲ್ಲಿ ಸವಲತ್ತುಗಳು ಶೋಷಿತರನ್ನು ಒಡೆಯುವ ಮತ್ತು ಅವರ ಆಳ್ವಿಕೆಯಲ್ಲಿಯೇ ಉದ್ಧಾರವಾಗಬಹುದೆಂಬ ಭ್ರಮೆಯನ್ನು ಹುಟ್ಟಿಸಿ ತಮ್ಮ ಸ್ಥಾನ ಭದ್ರಪಡಿಸಿಕೊಳ್ಳುವ ತಂತ್ರವೇ ಆಗಿರುತ್ತದೆ. ಈ ಸತ್ಯ ನಮ್ಮ ವ್ಯವಸ್ಥೆಯ ಬಗ್ಗೆಯೂ ಸಹ ನಿಜ.

ಈ ದೇಶದಲ್ಲಿ ವರ್ಗ ಹೋರಾಟ ಆಗಬೇಕೆ, ಜಾತಿ ಹೋರಾಟ ಆಗಬೇಕೇ ಅಥವಾ ಹೋರಾಟವಿಲ್ಲದೆ ಸವಲತ್ತುಗಳನ್ನು ಪಡೆಯಲು ಸಂಘಟನೆಗೊಳ್ಳಬೇಕೆ ಎನ್ನುವ ವಿಷಯದಲ್ಲಿ ವಿವಿಧ ರಾಜಕೀಯ ಪಕ್ಷಗಳು ಸಂಘಟನೆಯಲ್ಲಿ ಕಳೆದ 30 ವರ್ಷಗಳಲ್ಲಿ ತೊಡಗಿವೆ. ಇಲ್ಲಿಯವರೆಗೆ ಅದರ ಫಲವೇನು? ಶ್ರೀಮಂತ ವರ್ಗ ಅಧಿಕಾರದಲ್ಲಿಯೇ ಉಳಿದಿದೆ. ದಲಿತರ ಉದ್ಧಾರದ ಹೆಸರು ಹೇಳಿ ಕೆಲವು ಜನ ಎಂ.ಎಲ್.ಎ. ಮತ್ತು ಎಂ.ಪಿ.ಗಳಾಗಿದ್ದಾರೆ. ವರ್ಗ ಹೋರಾಟವನ್ನು ದಿನ ಬೆಳಗಾದರೆ ಜಪಿಸುವ ಎರಡುಪಕ್ಷಗಳು ಈಗಿರುವ ವ್ಯವಸ್ಥೆಯಲ್ಲೇ ಸರಕಾರಗಳನ್ನು ರಚಿಸಿವೆ. ಈ ದೃಷ್ಟಿಯಲ್ಲಿ ಜೆ.ಪಿ.ಯವರ ಹೊಸ ರಾಗವನ್ನು ಕೇಳಿ ಯಾರೂ ಸಹ ಉಲ್ಲಾಸಗೊಳ್ಳಬೇಕಾಗಿಲ್ಲ.

ಬ್ರಾಹ್ಮಣ-ಶೂದ್ರ ಹೋರಾಟದಲ್ಲಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿರುವ ಜನರಿಂದ ದಲಿತರುಏನನ್ನೂ ನಿರೀಕ್ಷಿಸುವಂತಿಲ್ಲ. ವರ್ಗ ಸಂಘಟನೆಯಲ್ಲಿ ತೊಡಗಿದ ಎಡ ಪಾರ್ಲಿಮೆಂಟರೀ ಪಕ್ಷಗಳೂ ಸಹ ಯಾವುದೇ ಮಂತ್ರಿಗಳಾಗುವ ರಾಜಕಾರಣಿಗಳಿಗಿಂತ ಭಿನ್ನವಾಗಿಲ್ಲವೆಂಬುದು 18% ಅಲ್ಲದ ದಲಿತರಿಗೆ ಚೆನ್ನಾಗಿ ಗೊತ್ತಿದೆ. ದಲಿತ ಸಂಘಟನೆ ಆಗಬೇಕಾದದ್ದು ಈ ದೇಶದಲ್ಲಿ ಬಲವಾಗಿ ಉಳಿದಿರುವ ಭೂಸ್ವಾಮಿ ಪದ್ಧತಿಯನ್ನು ನಾಶಗೊಳಿಸಿ, ಸಮಾನತೆಯ ಆಧಾರದ ಮೇಲೆ ನಿಂತಿರುವ ಕಾರ್ಯಕ್ರಮದ ಅಡಿಯಲ್ಲಿ. ಜಮೀನುದಾರರ ವಿರುದ್ಧ ಹೋರಾಟವೆಂದರೆ ಜಮೀನಿಗಾಗಿ, ಸಾಮಾಜಿಕ ನ್ಯಾಯಕ್ಕಾಗಿ ಹೋರಾಟವೆಂದರ್ಥ. ಈ ಹೋರಾಟದಲ್ಲಿ ಬಹುಪಾಲು ಜನ ಬಡ ಮತ್ತು ಭೂರಹಿತರಾದ ಹರಿಜನರ ಪಾತ್ರ ಮುಖ್ಯ. ಆದರೆ ಕೇವಲ ಹರಿಜನರು ಈ ಹೋರಾಟವನ್ನು ಮುಗಿಸಲು ಬೇರೆ ಜಾತಿಯ ಬಡವರೊಡನೆ ಸೇರದೇ ಅಸಾಧ್ಯ. ಹಳ್ಳಿಗಳಲ್ಲಿ ಜಮೀನ್ದಾರರ ರಾಜಕೀಯ ಹಿಡಿತ ಹೋದಾಗಲೇ ದಲಿತರಿಗೆ ಮುಕ್ತಿ. ಈ ಸತ್ಯದ ಅರಿವಿಲ್ಲದೆ ವರ್ಗ ಹೋರಾಟ ದಲಿತೋದ್ಧಾರದ ಮಾತು ಬರೀ ಬೂಸಾ ಆಗುತ್ತದೆ. ಸಾಂಸ್ಕೃತಿಕ (ಅಂದರೆ ಅಸ್ಪೃಶ್ಯತೆ, ಸಮಾನ ಅವಕಾಶ) ಹೋರಾಟವೂ ಸಹ ಅತ್ಯವಶ್ಯ. ಈ ಬಗ್ಗೆ ದಲಿತ ಬುದ್ಧಿಜೀವಿಗಳು ಆಲೋಚಿಸಬೇಕಾದ್ದು ಚರಿತ್ರೆಯಲ್ಲಿ ಅನಿವಾರ್ಯವಾಗಿದೆ.

-ವಿ. ಲಕ್ಷ್ಮೀನಾರಾಯಣ

# ಅನ್ವರ್ ಖುದ್ದೂಸ್ ಸಾಹೇಬರೇ ಜಾಗ ಖಾಲಿ ಮಾಡಿ ಮತ್ತೆಲ್ಲಿಗೆ ಹೋಗುವುದು ?

[ನಮ್ಮ ನಗರ ಪ್ರತಿನಿಧಿಯಿಂದ]

ಭದ್ರಾವತಿ ನ್ಯೂಮಾಡಲ್ ಕಾಲೋನಿ ಸರ್ವೆ ನಂ. 93ರ ರಲ್ಲಿರುವ ಸುಮಾರು 5 ಎಕರೆ 12 ಗುಂಟೆ ಜಮೀನು ಸದರಿ ನಗರದ ಹರಿಜನರಿಗೆ ಸೇರಿದ ಉಂಬಳಿ ಭೂಮಿ. ಇಂಥ ಉಂಬಳಿಭೂಮಿ ಬಹಳ ಕಾಲ ಸಾಗುವಳಿಯಾಗದೆ ಹಾಗೆ ಬಿದ್ದುದರಿಂದ ವಿವಿಧ ಕಡೆಗಳಿಂದ ಬಂದ ಹರಿಜನರು ವಸತಿ ಸೌಕರ್ಯವಿಲ್ಲದೆ ಈ ಜಮೀನಿನಲ್ಲಿ 1958 ರಿಂದ ಗುಡಿಸಲು ಕಟ್ಟಿ ವಾಸಿಸತೊಡಗಿದರು. ಈಗ ಅಲ್ಲಿ 65 ಕುಟುಂಬಗಳು ವಾಸಿಸುತ್ತಿವೆ. ಸೈಟು ಮಂಜೂರಾತಿಗಾಗಿ ಈ ಬಡ ಹರಿಜನರು 1958ರಲ್ಲಿ ಸರ್ಕಾರಕ್ಕೆ, ಮುನಿಸಿಪಾಲಿಟಿಗೆ ಅರ್ಜಿಸಲ್ಲಿಸುತ್ತ ಬಂದಿದ್ದಾರೆ. 8 ವರ್ಷಗಳ ತರುವಾಯ 1966ರಲ್ಲಿ ಪುರಸಭಾ ಅಧ್ಯಕ್ಷರಾಗಿದ್ದ ಶ್ರೀ ಕೃಷ್ಣಭಟ್ಟರು, ಈ ಸ್ಥಳದಿಂದ ಹರಿಜನರನ್ನು ಓಡಿಸಲು ಯತ್ನಿಸಿ ಜಾಗ ಖಾಲಿಮಾಡುವಂತೆ ಕೋರ್ಟಿನಿಂದ ಆಜ್ಞೆ ಹೊರಡಿಸಿದರು. ನಗರ ರಕ್ಷಕ ಹರಿಜನರ ಪಾಲಿಗೆ ಭಕ್ಷಕನಾದ. ದಿಕ್ಕುತೋರದ ಅವಿದ್ಯಾವಂತ ಹರಿಜನರು ಕೋರ್ಟಿಗೂ ಸರ್ಕಾರಕ್ಕೂ ಮನವಿ ಮಾಡಿಕೊಳ್ಳಲು ಕೋರ್ಟಿನಲ್ಲಿ ತಲಾ 50-00ರೂ ಫೈನು, ಹಾಗೂ 16 ಜನ 6¼ ರೂ. ನಂತೆ ಕಾಂಪೌಂಡ್ ಫೈನು ಕಟ್ಟಬೇಕಾಯಿತು. ಆದರೂ ಹರಿಜನರು ಎದೆಗುಂದದೆ ಸಂಬಂಧಪಟ್ಟವರಿಗೂ ಸರ್ಕಾರಕ್ಕೂ ಅರ್ಜಿಸಲ್ಲಿಸುವುದನ್ನು ಮುಂದುವರಿಸಿದರು. ಹತ್ತು ವರ್ಷಗಳ ಅರ್ಜಿ ಕಂತೆಗಳು ಯಾವ ಅಧಿಕಾರಿಯ ಮನವನ್ನೂ ಪುರಸಭಾಧ್ಯಕ್ಷರ ಹೃದಯವನ್ನೂ ಕರಗಿಸಲಿಲ್ಲ.

15 ವರ್ಷಗಳ ತರುವಾಯ 1973ರಲ್ಲಿ ಪೌರಾಡಳಿತ ಸಚಿವ ಶ್ರೀ ಬಿ. ಬಸವಲಿಂಗಪ್ಪನವರು ಪುರಸಭೆಯವರು ಈ ಕೂಡಲೆ ಉಂಬಳಿದಾರರಿಗೆ ಪರಿಹಾರಧನ ಕೊಟ್ಟು ಹರಿಜನರಿಗೆ ಸೈಟು ವಿಲೇವಾರಿ ಮಾಡಬೇಕೆಂದು ಆಜ್ಞೆ ಮಾಡಿದರು. ಆಗ ಪುರಸಭಾ ಅಧ್ಯಕ್ಷರು ಸ್ಥಳಪರೀಕ್ಷೆ ಮಾಡಿ ಹರಿಜನರಿಗೆ ಜಮೀನು ಹಂಚಿಕೆಯ ಬಗ್ಗೆ ಪುರಸಭೆಯಲ್ಲಿ ತೀರ್ಮಾನಕ್ಕೆಗೊಂಡು ತಲಾ 25 ರೂ. ನಂತೆ ನೆಲಬಾಡಿಗೆ ವಸೂಲಿ ಮಾಡಿ ಹರಿಜನರಿಗೆ ರಸೀದಿಕೊಟ್ಟರು. ಹಣಕಟ್ಟಿಸಿಕೊಂಡರೂ ಮತ್ತೆ ಕೆಲವರಿಗೆ ರಸೀದಿ ಕೊಡಲಿಲ್ಲ. ನೆಲಬಾಡಿಗೆ ವಸೂಲಿ ಮಾಡಲು ಮುಂದಾದ ಮುನಿಸಿಪಾಲಿಟಿಯವರು ಸೈಟನ್ನು ಹಂಚುವುದೂ ತಮ್ಮ ಜವಾಬ್ದಾರಿ ಎಂದು ತಿಳಿಯಲಿಲ್ಲ. ಆದರಲ್ಲೂ ಭ್ರಷ್ಟರು ಬಡವರ ದುಡ್ಡು ನುಂಗಿದರು.

ಮುನಸಿಪಾಲಿಟಿಯವರು ಸೈಟುಗಳ ಪಟ್ಟಿ ಮಾಡುವಾಗ ಸುಳ್ಳುಜಾತಿಗಳನ್ನು ಸೃಷ್ಟಿ ಮಾಡಿದ್ದಾರೆ. ಪಟ್ಟಿಯಲ್ಲಿ ಗೌಡ ಹರಿಜನನಾಗಿದ್ದರೆ–ಹರಿಜನ ಗೌಡನಾಗಿದ್ದಾನೆ. ಇದನ್ನೆಲ್ಲ ಸಂಬಂಧಪಟ್ಟ ಅಧಿಕಾರಿಗಳ ಗಮನಕ್ಕೆ ತಂದು ಆದಷ್ಟು ಬೇಗ ಸೈಟು ಹಂಚಿಕೆ ಮಾಡಿಕೊಡಬೇಕೆಂದು ಕೇಳಿಕೊಂಡರೂ ಇನ್ನೂ ಅಧಿಕಾರಿಗಳ ಗಮನ ಇತ್ತ ಹರಿದಿಲ್ಲ. ಜನ ಆತಂಕಗೊಂಡಿದ್ದಾರೆ.

ಈ ಮಧ್ಯೆ ಕಳೆದಬಾರಿ ವಿಧಾನಸಭಾ ಚುನಾವಣಾ ಸಮಯದಲ್ಲಿ ಸ್ಥಳೀಯ ಎಂ.ಎಲ್.ಎ. ಅನ್ವರ್ ಖುದ್ದೂಸ್ ಸಾಹೇಬರು ಮತ್ತು ಕಾಂಗ್ರೆಸ್ ಧುರೀಣ ಭೂತನಗುಡಿ ರಂಗಪ್ಪನವರು, ಕಾಲೋನಿಗೆ ಬಂದು "ನೀವೆಲ್ಲ ನಮಗೆ ಓಟು ಕೊಟ್ಟು ಜಯಗಳಿಸಿದ್ದೇ ಆದರೆ ಈ ಸೈಟನ್ನು ನಿಮಗೆ ಮಾಡಿಸಿ ಕೊಡುತ್ತೇವೆ" ಎಂದು ಹರಿಜನರ ಕೈಯಿಂದ ಹಾಲಿನ ಪ್ರಮಾಣ ಮಾಡಿಸಿ ಓಟು ತೆಗೆದುಕೊಂಡರು. ಅನ್ವರ್ ಖುದ್ದೂಸರು ಎಂ. ಎಲ್. ಎ. ಆದರು. ಎಂ. ಎಲ್. ಎ. ಅನ್ವರ್ ಖುದ್ದೂಸರಿಗೆ ಜನ ಹೂವಿನ ಹಾರ ಹಾಕಿ "ನಿಮ್ಮ ಮಾತಿನ ಪ್ರಕಾರ ನಾವು ನಡೆದುಕೊಂಡೆವು. ಈಗ ನೀವು ನಿಮ್ಮ ಮಾತು ನಡೆಸಿಕೊಡಿ" ಎನ್ನಲು ಅನ್ವರ್ ಖುದ್ದೂಸರು "ಈ ಜಾಗ ರೆಗ್ಯುಲೇಟೆಡ್ ಮಾರ್ಕೆಟ್‌ಗೆಬೇಕಾಗಿದೆ. ಮೊದಲು ಈ ಜಾಗ ಖಾಲಿ ಮಾಡಿ ಆಮೇಲೆ ಬೇರೆ ಕಡೆ ನೋಡಿ ಸೈಟು ಕೊಡಿಸುತ್ತೇವೆ" ಎಂದರು. ಒಂದು ಕಡೆಗೆ ಹರಿಜನರ ಉದ್ಧಾರದ ಬಗ್ಗೆ ಮಾತನಾಡುತ್ತ ಮತ್ತೊಂದು ಕಡೆ ಅವರ ಕತ್ತು ಕೊಯ್ಯುವ ಇಂಥ ದೇಶಭಕ್ತರು ಹರಿಜನ ದ್ರೋಹಿಗಳಲ್ಲದೆ ಮತ್ತೇನು ?

## ಶ್ರೀನಿವಾಸಪುರದ ಹಾಸ್ಟಲುಗಳಲ್ಲಿ ಅನ್ಯವಹಾರ : ಅಧಿಕಾರಿಗಳೆ ಬೆಂಗಾವಲಿರುವಾಗ ಮತ್ತಾರ ಭಯ ?

(ವರದಿ: ನಮ್ಮ ಪ್ರತಿನಿಧಿಯಿಂದ)

ಕೋಲಾರ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಶ್ರೀನಿವಾಸಪುರದಲ್ಲಿ ಸಮಾಜ [illegible]

ನಂತರ ಉಳಿತ ಝೂಟ್ ದುಷ್ಟರ ಗುಂಪುಗಳು ಎಂದಿಗಿಂತಲೂ ಹೆಚ್ಚು ಕ್ರಿಯಾತ್ಮಕವಾಗಿ ಕೆಲಸ ಮಾಡುತ್ತಿವೆ ಎಂದು ಆರೋಪಿಸಲಾಗಿದೆ.

ಮೀರತ್‌ನ ಕಾಂಗ್ರೆಸ್ ವಿಧಾನಸಭಾ ಸದಸ್ಯ ಮಂಜೂರ್ ಅಹಮದ್ ಅವರು ಉತ್ತರಪ್ರದೇಶ ವಿಧಾನಸಭಾ ಅಧಿವೇಶನದ ರಾಜ್ಯಪಾಲರ ಭಾಷಣದ ಮೇಲೆ ಚರ್ಚೆ ಮಾಡುತ್ತ ಝೂಟರ ದಬ್ಬಾಳಿಕೆಯ ಬಗ್ಗೆ ಪ್ರಶ್ನೆ ಮಾಡಿದ್ದಲ್ಲದೆ, ಪ್ರಧಾನ ಮಂತ್ರಿಯವರಿಗೆ ಸ್ವಲಿಖಿತ ಪತ್ರವೊಂದನ್ನು ಬರೆದು "ಇತ್ತೀಚೆಗೆ ಆಯ್ಕೆಯಾದ ಉತ್ತರಪ್ರದೇಶದ ಐ.ಜಿ.ಪಿ. ಝೂಟ್ ಜನಾಂಗಕ್ಕೆ ಸೇರಿದವರು ಮಾತ್ರವಲ್ಲದೆ, ಚೌಧರಿಚರಣಸಿಂಗರ ಸಂಬಂಧಿಗಳೂ ಆಗಿದ್ದಾರೆ. ಇಷ್ಟಲ್ಲದೆ ಪ್ರಮುಖ ಪೋಲೀಸ್ ಕೇಂದ್ರಗಳು ಝೂಟ್ ಅಧಿಕಾರಿಗಳಿಂದ ತುಂಬಿ ಹೋಗಿವೆ" ಎಂದು ದೂರಿದ್ದಾರೆ. ಶ್ರೀ ಅಹಮದ್ ಪ್ರಕಾರ, ಮಾರ್ಚ್ ಇಪ್ಪತ್ತರದರು. ಎ.ಸಿ. ಯವರು ತಕ್ಷಣ ಹಾಸ್ಟಲಿಗೆ ಸಂಬಂಧಪಟ್ಟ ರಿಜಿಸ್ಟರ್‌ಗಳನ್ನು ಸೀಜ್ ಮಾಡಿಸಿ ಸಮಾಜ ಕಲ್ಯಾಣ ಇನ್ಸ್‌ಪೆಕ್ಟರಿಗೆ ಒಪ್ಪಿಸಿದರು. ಇದಾದ ಮೇಲೆ ಹಾಸ್ಟಲ್‌ನಲ್ಲಿ

ವಾದ ಭಪ್ರೌಲಿ ಚೌಧರಿಚರಣಸಿಂಗರ ಬಹಳ ಹಳೆಯ ಕ್ಷೇತ್ರ. ಅಲ್ಲಿ ನಡೆದ ಒಂದು ಘಟನೆ ಎದೆಯನ್ನು ಇರಿಯುವಂಥಾದ್ದು. ಜುಲೈ 22 ರಂದು ಸಂಜೆ ನಾಲ್ಕು ಗಂಟೆ ಹೊತ್ತಿನಲ್ಲಿ, ರಾಮಲ ಹಳ್ಳಿಯ 22 ವಯಸ್ಸಿನ ಹರಿಜನ ಯುವಕ ರಾಜಪಾಲ ತನ್ನ ಜಮೀನಿನಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಝೂಟ್ ಜಮೀನುದಾರರು ಅವನ ಮೇಲೆ ಹಲ್ಲೆ ನಡೆಸಿ, ಗಾಯಗೊಂಡ ಅವನನ್ನು ಮನೆಯಲ್ಲಿ ಕೂಡಿ ಬೀಗ ಹಾಕಿದರು. ಅಲ್ಲಿ ಪ್ರಜ್ಞೆ ತಪ್ಪುವವರೆಗೂ ಅವನ ಗುಪ್ತಾಂಗಗಳಿಗೆ ಲಾಟಿಗಳಿಂದ ಹೊಡೆದು ತರುವಾಯ ಅವನನ್ನು ಗಾಡಿಯಲ್ಲಿ ಹಾಕಿ ಪೋಲೀಸು ಠಾಣೆಗೆ ಒಯ್ದು, ಝೂಟ್ ಹುಡುಗಿಯೊಬ್ಬಳ ಮೇಲೆ ಅತ್ಯಾಚಾರ ನಡೆಸಲು ಪ್ರಯತ್ನಿಸಿದನೆಂದು ಅವನ ಮೇಲೆ ಆರೋಪ ಹೊರಿಸಿದರು.

ಉತ್ತರ ಪ್ರದೇಶದ ರಾವಣ ಎಂಬ ಚಿಕ್ಕ ಹಳ್ಳಿಯಲ್ಲಿ ಸರ್ಕಾರ ಹರಿಜನರಿಗೆ ಭೂಮಿ

ಕಳೆದ ಹದಿನೈದು ನಂತರ ಪೈರನ್ನು ಬಲವಂತವಾಗಿ ಕಟಾವು ಮಾಡಲಾಯಿತು. ಮತ್ತು ಅವಳ ಮೇಲೆ ಮರಣಾಂತಿಕ ಆಕ್ರಮಣ ನಡೆಸಿ ಭೂಮಿಯಿಂದ ಓಡಿಸಲಾಯಿತು. ಮಾವನ ತಾಲ್ಲೂಕಿನ ಹಾದಿಪುರದ ಹರಿಜನರು ಝೂಟರ ದಬ್ಬಾಳಿಕೆಗೆ ಹೆದರಿ ಸತ್ಯ ವಿಚಾರವನ್ನು ತಿಳಿಸಲು ಹಿಂಜರಿಯುತ್ತಿದ್ದಾರೆ.

ಮವಾನ ತಾಲ್ಲೂಕಿನ ಕಿಶೋರ್‌ಪುರದ ಮಜರಾಬಾರಾ ಎಂಬಲ್ಲಿ ಹರಿಜನರಿಗೆ ಚಿಕ್ಕ ಭೂಭಾಗಗಳನ್ನು ಹಂಚಿದ ಅಪರಾಧಕ್ಕಾಗಿ ನಿಸ್ಸಹಾಯಕ ಅಸ್ಪೃಶ್ಯರ ಮೇಲೆ ಸಶಸ್ತ್ರ ಆಕ್ರಮಣ ನಡೆಸಲಾಯಿತು. ಝೂಟ್ ಅತ್ಯಾಚಾರಿಗಳು ತಕ್ಷಣವೇ ನಲವತ್ತೊಂಬತ್ತು ಹರಿಜನರ ಮೇಲೆ ಬಿದ್ದು ಒಬ್ಬನನ್ನು ಕೊಂದು ಉಳಿದವರನ್ನು ತೀವ್ರ ಗಾಯಗೊಳಿಸಿದರು. ತತ್ಫಲವಾಗಿ ಹರಿಜನರಿಗೆ ಹಂಚಿದ ಭೂಮಿ ಝೂಟರ ಪಾಲಾಯಿತು.

ಮೀರತ್ ಪಟ್ಟಣಕ್ಕೆ ಹೊಂದಿಕೊಂಡಂತೆ ಇರುವ ಅನ್ರಾಪಲಿ ಎಂಬಲ್ಲಿ ಹರಿಜನರ

ಒಂದು ಕಡೆ ಸರ್ಕಾರದ ಚಾಂದಸ [illegible]

ಬಲವಂತ ಸಂಭೋಗ ಮಾಡಲಾಯಿತು. ಈ ಬಗ್ಗೆ ಪೋಲೀಸಿಗೆ ದೂರು ಕೊಟ್ಟರೂ ಯಾವುದೇ ಕ್ರಮ ಕೈಗೊಳ್ಳಲಾಗಿಲ್ಲ. ಛಿಘಾದ ಜಸವಂತಿ ಎಂಬ ಹರಿಜನ ಗೃಹಿಣಿಯ ಮೇಲೆ ಲೈಂಗಿಕ ಅತ್ಯಾಚಾರ ನಡೆಸುತ್ತಿರಲು ಅವಳನ್ನೂ ರಕ್ಷಿಸಲು ಯತ್ನಿಸಿದ ಅವಳ ಪತಿಯ ಕೈಯನ್ನು ಲಾಠಿಯಿಂದ ಹೊಡೆದು ಮುರಿಯಲಾಯಿತು.

ಸರ್ಧಾನಾದ ಹರಿಜನ ನಾಯಕ ಹರ್ ಬಾಲನು ತನಗೆ ಸರ್ಕಾರ ಕೊಟ್ಟಿದ್ದ ಭೂಮಿಯನ್ನು ಉಳುವ ಯತ್ನ ಮಾಡಿದ್ದಕ್ಕಾಗಿ ಸಶಸ್ತ್ರ ಝೂಟ್ ಹತ್ಯಾಕಾರಿಗಳು ಅವನ ತಲೆ ಕತ್ತರಿಸುವ ಯತ್ನಮಾಡಿ ವಿಫಲರಾದರು. ಅವನನ್ನು ರಕ್ಷಿಸಿದ ತಪ್ಪಿಗಾಗಿ ಹರಿಜನರು ಮತ್ತು ಪೋಲೀಸರು ತೊಡಕಿನಲ್ಲಿ ಸಿಕ್ಕಿಕೊಂಡು ಪೇಚಾಡುತ್ತಿದ್ದಾರೆ.

(ಬ್ಲಿಜ್‌ನಿಂದ)

## ಹುಣಸೂರಿನ ಹಾಸ್ಟಲಿನಲ್ಲಿ ದಬ್ಬಾಳಿಕೆ, ಶೋಷಣೆ

(2ನೇ ಪುಟದಿಂದ ಮುಂದುವರೆದಿದೆ)

ದೂರಿನ ಬಗ್ಗೆ ತಮಗೆ ಬೇಕಾದವರಲ್ಲಿ "ಹಿಂಗಾದ್ರೂ ಹೆದರ್‍ಕೊಂಡು ಸುಮ್ನಿರ್‍ಲಿ ಅಂತ ದೂರುಕೊಟ್ಟೆ" ಎಂದು ಹೇಳಿಕೊಳ್ಳುತ್ತಿದ್ದರೆಂದು ತಿಳಿದು ಬಂದಿದೆ.

**ಅರಸರ ಬಲಗೈ ಬಂಟ**

ಶ್ರೀನಿವಾಸರು ಮುಖ್ಯಮಂತ್ರಿ ಅರಸರ ಬಲಗೈಬಂಟ ಅಂತ ಹುಣಸೂರಿನಲ್ಲಿ ಹೆಸರುವಾಸಿಯಾಗಿರುವುದರಿಂದ ವಿದ್ಯಾರ್ಥಿಗಳ ಬೇಡಿಕೆಗೆ ಎಲ್ಲೂ ಪುರಸ್ಕಾರ ಸಿಗಲಿಲ್ಲ. ಇದರಿಂದ ವಿದ್ಯಾರ್ಥಿಗಳೆಲ್ಲಾ ಒಟ್ಟಾಗಿ ಪ್ರತಿಭಟಿಸತೊಡಗಿ 13-9-77 ರಂದು ಸುಡು ಬಿಸಿಲಿನಲ್ಲಿ ಅನ್ಯಾಯದ ವಿರುದ್ಧ ಘೋಷಣೆ ಕೂಗುತ್ತ ಪ್ರತಿಭಟನಾ ಮೆರವಣಿಗೆ ಮಾಡಿದ್ದಲ್ಲದೆ ಧರಣಿ ಕುಳಿತರು. ಇದನ್ನು ತಿಳಿದ ಸಮಾಜ ಕಲ್ಯಾಣಾಕಾಧಿರಿಗಳು ಬಂದು ಬೇರೆ ವ್ಯವಸ್ಥೆ ಮಾಡುವುದಾಗಿ ಒಪ್ಪಿಕೊಂಡು ಸದ್ಯಕ್ಕೆ ಮತ್ತೊಂದು ಹಾಸ್ಟಲಿನಲ್ಲಿ ಊಟಕ್ಕೆ ವ್ಯವಸ್ಥೆ ಮಾಡಿರುವರು.

**ಗೂಂಡಾಗಳು ಬಂದು ಹುಡುಕಿದರು**

ಶಾಂತಿಯುತ ಪ್ರತಿಭಟನೆ ಮಾಡಿ ನ್ಯಾಯ ಕೇಳಿದ ವಿದ್ಯಾರ್ಥಿಗಳ ಮೇಲೆ ಗೂಂಡಾಗಿರಿ ಮಾಡಲು ಶ್ರೀನಿವಾಸರೇ ನಾಲ್ಕೈದು ಜನರನ್ನು ಮೆರವಣಿಗೆ ತೆಗೆದಿದ್ದ ಸಂಜೆಯೇ ಹಾಸ್ಟಲಿಗೆ ಕಳಿಸಿದ್ದರೆಂತಲೂ, ಆ ಸಮಯದಲ್ಲಿ ಗೂಂಡಾಗಳಿಗೆ ಬೇಕಾಗಿದ್ದ ವಿದ್ಯಾರ್ಥಿ ನಾಯಕರುಗಳು ಸಿಗಲಿಲ್ಲವಾಗಿ ಉಳಿದ ಹುಡುಗರನ್ನೆ ಹೆದರಿಸಿ "ಮತ್ತೆ ಗಲಾಟೆ ಮಾಡಿದರೆ ನಿಮ್ಮ ಕೈಕಾಲು ಮುರೀಬೇಕಾಗುತ್ತದೆ". ಎಂದು ಗದರಿಸಿ ಹೋದರೆಂದೂ ಮುಂದೆ ಇವರಿಂದ ನಮಗೆ ತೊಂದರೆಯಾಗಬಹುದೆಂದೂ ವಿದ್ಯಾರ್ಥಿಗಳು ಭಯದಿಂದ ಇದ್ದಾರೆ.

**ತನಿಖೆ ನಡೆಯಲಿ**

ಸರ್ಕಾರದಿಂದ ಪ್ರತಿ ವಿದ್ಯಾರ್ಥಿಗೆ ಸಿಕ್ಕುತ್ತಿರುವ 125 ರೂ. ಗಳಲ್ಲಿ ಕೇವಲ 70-75 ರೂಪಾಯಿಗಳಿಗೆ ಸರಿಹೊಂದುವಂಥ ಕಚಡಾ ಊಟ ಕೊಟ್ಟು, 50 ವಿದ್ಯಾರ್ಥಿಗಳಿರುವ ಈ ಹಾಸ್ಟಲಿನಲ್ಲಿ ಪ್ರತಿ ವಿದ್ಯಾರ್ಥಿಗಳಿಂದಲೂ ತಿಂಗಳಿಗೆ 50 ರೂ. ಗಳಂತೆ ನಾಲ್ಕು ವರ್ಷಗಳಿಂದ ಶ್ರೀನಿವಾಸ್ ಮತ್ತು ಕಂ. ಲಪಟಾಯಿಸಿರುವ ಹಣ ಕನಿಷ್ಟ 1 ಲಕ್ಷ ರೂ. ಆಗುತ್ತದೆ. ಇಂಥ ಹಗಲು ದರೋಡೆ ಬಗ್ಗೆ ಸರ್ಕಾರ ಕೂಡಲೇ ತನಿಖೆ ನಡೆಸಲಿ.

# ಉತ್ತರ ಪ್ರದೇಶದ ಅಂಕೆ ಇಲ್ಲದ ಭೂ ಮಾಲೀಕ ಝೂಟರು ದಲಿತರ ಮೇಲೆ ನಡೆಸುತ್ತಿರುವ ಅಮಾನುಷ ಕೃತ್ಯಗಳು

**ಝೂಟ್ ಎನ್ನುವುದು ಉತ್ತರ ಪ್ರದೇಶದ ಭೂಮಾಲೀಕ ಇಲ್ಲವೆ ಭೂ ಒಡೆತನವನ್ನು ಪಡೆದ ಪ್ರಮುಖ ಶೂದ್ರ ಜನಾಂಗ. ಇವರನ್ನು ನಾವು ಕರ್ನಾಟಕದ ಲಿಂಗಾಯಿತ, ಗೌಡ, ಆಂಧ್ರದ ರೆಡ್ಡಿ ಜನಾಂಗಕ್ಕೆ ಹೋಲಿಸಬಹುದು. ಕೇಂದ್ರ ಗೃಹಮಂತ್ರಿಗಳಾದ ಶ್ರೀ ಚರಣಸಿಂಗರು ಝೂಟ್ ಜನಾಂಗಕ್ಕೆ ಸೇರಿದವರು. ಕೇಂದ್ರದಲ್ಲಿ ಜನತಾಪಕ್ಷ ಆಡಳಿತಕ್ಕೆ ಬಂದು, ಚೌಧರಿ ಚರಣಸಿಂಗರು ಗೃಹಖಾತೆಯನ್ನು ವಹಿಸಿಕೊಂಡ ಮೇಲಂತೂ ಝೂಟರ ಸಶಸ್ತ್ರ ದುರಾಕ್ರಮಣಗಳು ದಿನೇ ದಿನೇ ಹೆಚ್ಚುತ್ತಿವೆ. ಇಷ್ಟಾದರೂ ಕೇಂದ್ರ ಗೃಹಮಂತ್ರಿಗಳ ಹೇಳಿಕೆಗಳು ವಾಸ್ತವ ಸತ್ಯವನ್ನು ಮರೆಮಾಚುತ್ತಿವೆ. ಉತ್ತರ ಪ್ರದೇಶದಲ್ಲಿ ಝೂಟರು ಹರಿಜನರ ಮೇಲೆ ನಡೆಸುತ್ತಿರುವ ಬರ್ಬರ ಕ್ರೌರ್ಯಗಳನ್ನು ಮೀರತ್‌ನ ಜನತಾ ಹರಿಜನ ಪಾರ್ಲಿಮೆಂಟರಿ ಸದಸ್ಯ ರಾಮ್ ನಿಹೋರ್ ರಾಕೇಶ್ ಮತ್ತು ಕಾಂಗ್ರೆಸ್ ವಿಧಾನಸಭಾ ಸದಸ್ಯ ಮಂಜೂರ್ ಅಹಮದ್ ಅವರು ಹೀಗೆ ಸಂಗ್ರಹಿಸಿದ್ದಾರೆ. —ಸಂ.**

ಜುಲೈ 25 ರಂದು ಹಲವು ನೂರು ಹರಿಜನರು ಮತ್ತು ಹಿಂದುಳಿದ ವಂಗಡಕ್ಕೆ ಸೇರಿದ ಭೂರಹಿತ ಕೂಲಿಗಾರರು ಸಿ ಪಿ ಐ. ನಾಯಕ ಆಚಾರ್ಯ ದೀಪಂಕರ್ ಅವರ ನೇತೃತ್ವದಲ್ಲಿ ಕಲೆಕ್ಟರ್‌ರವರ ಕಛೇರಿಯ ಮುಂದೆ ಮೆರವಣಿಗೆ ನಡೆಸಿ, ಝೂಟ್ ದರೋಡೆಕೋರರು ನಿಸ್ಸಹಾಯಕ ಅಸ್ಪೃಶ್ಯರ ವಿರುದ್ಧ ನಡೆಸುತ್ತಿರುವ ಕಿರಾತ ಕೃತ್ಯಗಳನ್ನು ವಿರೋಧಿಸಿ ಮನವಿಯೊಂದನ್ನು ಅರ್ಪಿಸಿದರು. ಮನವಿಯಲ್ಲಿ ಚೌಧರಿ ಚರಣಸಿಂಗರು ಗೃಹ ಖಾತೆಯನ್ನು ವಹಿಸಿಕೊಂಡ [illegible]

ಚುನಾವಣೆಯಲ್ಲಿ ಚೌಧರಿ ಚರಣಸಿಂಗರ ವಿರುದ್ಧ ಸ್ಪರ್ಧಿಸಿದ ಕಾಂಗ್ರೆಸ್ ಅಭ್ಯರ್ಥಿ ರಾಮಚಂದ್ರವೈಕಲ್ ಅವರ ಏಜೆಂಟ್ ರಮೇಶಚಂದ್ರಶರ್ಮ ಅವರು ತಮ್ಮ ಮನೆಯಲ್ಲಿ ಸಶಸ್ತ್ರ ಝೂಟ್ ಒಬ್ಬನಿಂದ ಕೊಲೆಯಾಗಿ ಬಿದ್ದಿದ್ದರು. ರಮೇಶಚಂದ್ರಶರ್ಮ ಅವರ ಸಹೋದರ ಭಾಗ್‌ಪಾಟ್ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಅವರ ಚಿಕ್ಕಪ್ಪ ಅದೇ ಝೂಟ್ ಸಶಸ್ತ್ರ ದುಷ್ಟರಿಂದ ಕೊಲೆ ಮಾಡಲ್ಪಟ್ಟರು.

ಉತ್ತರ ಪ್ರದೇಶದ ವಿಧಾನಸಭಾ ಕ್ಷೇತ್ರ [illegible]

ಯನ್ನು ಹಂಚಿತು. ಹರಿಜನರು ಗುಡಿಸಲುಗಳನ್ನು ನೆಟ್ಟು, ಬಸ್ತಿಯೊಂದನ್ನು ಕಟ್ಟಿದರು. ಅದನ್ನು ಸಹಿಸದ ಝೂಟ್ ಸಶಸ್ತ್ರ ಗೂಂಡಾಳುಗಳು ಆಕ್ರಮಣ ನಡೆಸಿ ಬಸ್ತಿಯನ್ನು ಸುಟ್ಟುಹಾಕಿದರು. ಬಹಳ ಒತ್ತಾಯದ ಮೇಲೆ ಹರಿಜನರು ಕೊಟ್ಟ ಪೋಲೀಸು ಪಿರ್ಯಾದನ್ನು ಹೆಚ್ಚು ಕಡಿಮೆ ಮಾಡಲಾಗಿದೆ. ಈಗ ಹರಿಜನರು ತಮ್ಮ ನಿವಾಸಗಳಿಂದ ಹೊರಬರಲು ಹೆದರುತ್ತಿದ್ದಾರೆ. ಇಂಥ ಅಮಾನುಷ ಕೃತ್ಯದ ಬಗ್ಗೆ ಕೇಂದ್ರ ಗೃಹ ಮಂತ್ರಿಗಳಿಗೆ ಜುಲೈ 2 ರಂದು ವರದಿ ಕಳಿಸಿದರೂ ಹತ್ಯಾಕಾರಿಗಳನ್ನು ಬಂಧಿಸುವ ಯಾವ ಕ್ರಮವನ್ನು ಕೈಗೊಳ್ಳಲಾಗಿಲ್ಲ.

ಝೂಟ್ ಜಮೀನುದಾರರು ಹರಿಜನರಿಂದ ಹಣ ಸುಲಿಗೆ ಮಾಡುತ್ತಿದ್ದಾರೆ. ಅವರನ್ನು ಬಲವಂತವಾಗಿ ಜಮೀನಿನಿಂದ ಓಡಿಸುತ್ತಿದ್ದಾರೆ. ಚೌರಾರಿ ಎಂಬ ಹಳ್ಳಿಯಲ್ಲಿ ಇದನ್ನು ವಿರೋಧಿಸಿದ್ದಕ್ಕಾಗಿ ಚಂದ್ರ ಎಂಬ ಹರಿಜನನನ್ನು ಹಾಗು ಅವನ ಮಗನನ್ನು ಮೃಗೀಯವಾಗಿ ಬಡಿಯಲಾಯಿತು. ತೆರಿನ ಎಂಬ ಹಳ್ಳಿಯಲ್ಲಿ ಅತರ್‌ಕಲಿ ಎಂಬ ಹರಿಜನ ಮಹಿಳೆಯ ಜಮೀನಿನಲ್ಲಿ [illegible]

ನೆಂಟು ವರ್ಷಗಳಿಂದ ಅರ್ಜಿ ಬರೆದು ಅಧಿಕಾರಿಗಳನ್ನು ಕಂಡು ಸುಳ್ಳು ಭರವಸೆಗಳನ್ನು ನಂಬಿ ಜನ ಸಾವಿರಾರು ರೂಪಾಯಿಗಳ ನಷ್ಟ ಹೊಂದಿದ್ದಾರೆ. ಈ ಬಡಾವಣೆಯಲ್ಲಿ ಕುಡಿಯಲು ನೀರಿಲ್ಲ. ರಸ್ತೆಗೆ ಬೆಳಕಿಲ್ಲ. ಮಕ್ಕಳಿಗೆ ಶಾಲೆ ಇಲ್ಲ. ಶಿಶುವಿಹಾರವಿಲ್ಲ ಚಾನಲ್ ನೀರು ನಿಂತಾಗ ಕುಡಿಯುವ ನೀರಿನ ಬವಣೆ ಹೇಳತೀರದು.

ಮೇಲೆ ನಡೆಯುತ್ತಿರುವ ಅತ್ಯಾಚಾರಗಳನ್ನು ಬಹಿರಂಗ ಪಡಿಸುತ್ತಿದ್ದ ಹರಿಜನ ನಾಯಕ ಚರಣಸಿಂಗನಿಗೆ ತೆಪ್ಪಗಿರಲು ಬೆದರಿಕೆ ಹಾಕಲಾಯಿತು. ಕಳೆದ ಒಂದು ತಿಂಗಳಿನಿಂದ ಅವನು ಜೀವ ಉಳಿಸಿಕೊಳ್ಳಲು ಓಡಾಡುತ್ತಿದ್ದು, ಕೊನೆಗೆ ಅವನಿಗೆ ಪೋಲೀಸು ರಕ್ಷಣೆ ಸಿಕ್ಕದಿರಲು ಹೆಂಡತಿ ಮಕ್ಕಳನ್ನು ಬಿಟ್ಟು ಹಳ್ಳಿಯಿಂದ ತಲೆಮರೆಸಿಕೊಳ್ಳಬೇಕಾಯಿತು.

ರಾಚಾರ್ ಪ್ರದೇಶದ ಹರಿಜನರು ಬಂಜರು ಭೂಮಿಯಲ್ಲೂ ಕೂತ ವಿಶ್ರಾಂತಿ ತೆಗೆದುಕೊಳ್ಳಲು ಬಿಡುತ್ತಿಲ್ಲ. ಅಲ್ಲದೆ ಯಾವೊಬ್ಬನೇ ಆಗಲಿ ತನ್ನ ಜಮೀನಿನಲ್ಲಿ ಹರಿಜನರನ್ನು ಬಿಟ್ಟುಕೊಂಡದ್ದೇ ಆದರೆ ಅಂತಹವನಿಗೆ 101 ರೂ. ಗಳ ದಂಡವನ್ನು ಹಾಕುವುದಲ್ಲದೆ, ಸಾಮಾಜಿಕ ಬಹಿಷ್ಕಾರವನ್ನು ಅನುಭವಿಸಬೇಕಾಗುವುದೆಂದು ಝೂಟರು ಬಹಿರಂಗವಾಗಿ ಘೋಷಿಸಿದ್ದಾರೆ, ಭೂಮಿಯಿಂದ ಓಡಿಸಿದ್ದಾರೆ. ಕೊಲೆಮಾಡಿದ್ದಾರೆ, ಬಂದೂಕಿಗೆ ಬಲಿ ತೆಗೆದುಕೊಂಡಿದ್ದಾರೆ.

ಲಾಲ್‌ಕುರ್ತ, ಬಾಂಖರಿ, ಬಿರು ಮತ್ತು ದಾದರಿಯ ಅಲ್ಲಿ ಐದು ಜನ ಹರಿಜನ [illegible]

ಪ್ರವೃತ್ತಿ, ಮತ್ತೊಂದು ಕಡೆ ಅಧಿಕಾರಿವರ್ಗದವರ ಬೇಜವಾಬ್ದಾರಿ, ಇನ್ನೊಂದು ಕಡೆ ಸ್ಥಳೀಯ ರಾಜಕಾರಣಿಗಳ ಕುತಂತ್ರ ಇವುಗಳಿಂದ ಹರಿಜನರು ನಿರಾಶ್ರಿತರಂತಾಗಿದ್ದಾರೆ. 18 ವರ್ಷಗಳ ಅವರ ಸಹನೆ ಜ್ವಾಲಾಮುಖಿಯಾಗಿ ಸಿಡಿಯುವುದಕ್ಕಿಂತ ಮುಂಚೆ ಸಂಬಂಧ ಪಟ್ಟವರು ಅತ್ತಗಮನ ಹರಿಸುತ್ತಾರೆಯೆ ?

---

[illegible] ಸಾರ್ವಜನಿಕ ಹಾಸ್ಟಲ್, 2. ಬಾಲಕಿಯರ ಸಾರ್ವಜನಿಕ ಹಾಸ್ಟಲ್, 3. ಮಹಿಳಾ ಸಮಾಜ ಕಲ್ಯಾಣ ಮತ್ತು ಶಿಶುವಿಹಾರ ಹಾಗೂ, 4. ಆಶ್ರಮ ಪಾಠಶಾಲೆ ಈ ನಾಲ್ಕು ನಿಲಯಗಳು ತಾಲ್ಲೂಕಿನ B.D.O, ರವರ ನೇತೃತ್ವದಲ್ಲಿ ನಡೆಯುತ್ತಿವೆ.

ಈ ಹಾಸ್ಟೆಲುಗಳ ವಿದ್ಯಾರ್ಥಿಗಳಿಗಾಗಿ ಸರಕಾರ ಕೊಡುವ ಎಣ್ಣೆ ಸೋಪು, ಪಠ್ಯ ಪುಸ್ತಕ, ಪೆನ್ಸಿಲ್, ನೋಟು ಪುಸ್ತಕಗಳು ಮತ್ತು ಬಿಳಿಕಾಗದಗಳನ್ನು ಇಲ್ಲಿನ ಹಾಸ್ಟಲ್ ವಾರ್ಡನ್‌ಗಳು ನೆಪಮಾತ್ರಕ್ಕೆ ಸ್ವಲ್ಪ ಸ್ವಲ್ಪ ವಿದ್ಯಾರ್ಥಿಗಳಿಗೆ ಕೊಟ್ಟು ಉಳಿದದ್ದನ್ನು ತಾವೇ ಲಪಟಾಯಿಸುತ್ತಿರುವ ಸಂಗತಿ ತಿಳಿದುಬಂದಿದೆ. ಮತ್ತು ಇದಲ್ಲದೆ ಬಾಲಕರ ಸಾರ್ವಜನಿಕ ಹಾಸ್ಟಲ್ ವಾರ್ಡನ್ ತಿಪ್ಪಾರೆಡ್ಡಿಯವರು ಹಾಸ್ಟಲ್‌ಗೆ ಸೇರಿದ ಎಣ್ಣೆ, ಗೋಧಿ, ರಾಗಿ, ಹಾಲಿನ ಪೌಡರ್ ಇತ್ಯಾದಿಯನ್ನು ತಮ್ಮ ಮನೆಗೆ ಸಾಗಿಸುತ್ತಿದ್ದು ಇದೆಲ್ಲಾ B D. O., A. C., ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಗೊತ್ತಿದ್ದರೂ ಯಾವ ಕ್ರಮವನ್ನು ತೆಗೆದುಕೊಳ್ಳದೆ ತೆಪ್ಪಗಿದ್ದಾರೆ. ಇದರ ಹಿಂದೆ ವಾರ್ಡನ್‌ಗಳು ಹಾಸ್ಟಲ್‌ನಿಂದ ಲಪಟಾಯಿಸುವುದರಲ್ಲಿ ಬಿ.ಡಿ.ಓ.ಗೂ ಅರ್ಧ ಭಾಗ ಸಲ್ಲುತಿದೆ ಎನ್ನುವ ಸುದ್ದಿಯೂ ಇದೆ.

ಆಗಸ್ಟ್ ತಿಂಗಳಲ್ಲಿ ಬಾಲಕರ ಸಾರ್ವಜನಿಕ ಹಾಸ್ಟಲ್‌ನಿಂದಹಾಲಿನ ಪುಡಿ, ಅಕ್ಕಿ, ರಾಗಿ, ಮತ್ತು ಎಣ್ಣೆ ಡಬ್ಬಗಳನ್ನು ಕಳ್ಳತನದಿಂದ ಸಾಗಿಸುತ್ತಿದ್ದಾಗ ಮಾಲು ಸಮೇತ ಊರಿನ ಹರಿಜನ ಮುಖಂಡರು ಹಿಡಿದು ಬಿ.ಡಿ.ಓ. ಕೋಲಾರದ ಸಬ್ ಡಿವಿಜನಲ್ ಆಫೀಸರ್ ಮತ್ತು ಎ.ಸಿ ಯವರಿಗೆ ತಿಳಿಸಿ [illegible]

ನಡೆಯುತ್ತಿರುವ ಇಂಥ ಅವ್ಯವಹಾರಗಳಿಗೆ ಕೊನೆಯಾಗುತ್ತದೆ ಎಂದು ಅಂದುಕೊಂಡಿದ್ದ ಅಲ್ಲಿನ ಜನರಿಗೆ ವಾರ್ಡನ್ ತಿಪ್ಪರೆಡ್ಡಿಯವರಿಗೆ ಇನ್ನೊಮ್ಮೆ ಈ ರೀತಿ ಮಾಡಬಾರದೆಂದು ಎಚ್ಚರಿಸಿ ಈ ಸಲಕ್ಕೆ ಮಾಫಿ ಮಾಡಿರುವುದಾಗಿ ತಿಳಿದು ಬಂತು ಎಂದು ಗೊತ್ತಾಗಿದೆ.

ಇದು ಇಷ್ಟಕ್ಕೆ ನಿಲ್ಲಲಿಲ್ಲ. ಮತ್ತೆ ಇಂಥ ಗುಪ್ತ ರವಾನೆ ನಡೆಯತೊಡಗಿತು. ತಾ|| 5-9-77 ರಂದು ಅಂಬೇಡ್ಕರ್ ಪಾಳ್ಯದ ನಿವಾಸಿಗಳಾದ ಓಬಳೇಶ್ ಬಿನ್ ಈರಪ್ಪ ಮತ್ತು ಗಂಗುಲಪ್ಪ ಬಿನ್ ತಿರುಮಳಪ್ಪ ಎಂಬುವರು ಸ್ಥಳೀಯ ಪೋಲೀಸ್ ಸಬ್ ಇನ್ಸ್‌ಪೆಕ್ಟರ್‌ರವರಿಗೆ ಮೊದಲೇ ಈ ಗುಪ್ತ ರವಾನೆಯ ಬಗ್ಗೆ ತಿಳಿಸಿದ್ದು. ಆ ರಾತ್ರಿ ಅವರ ಎದುರಿಗೆ ಸುಮಾರು 10 ಗಂಟೆ ಸಮಯದಲ್ಲಿ ಬಾಲಕರ ಸಾರ್ವಜನಿಕ ಹಾಸ್ಟೆಲ್‌ನಿಂದ ಅಲ್ಲಿನ ವಾರ್ಡನ್ ತಿಪ್ಪಾರೆಡ್ಡಿ ತಮ್ಮವರ ಜೊತೆಗೂಡಿ ತಮ್ಮ ಸ್ವಂತ ಸೈಕಲ್ ಮೇಲೆ ಸುಮಾರು 10ಕೆ.ಜಿ ಹಾಲಿನ ಪುಡಿ, 2 ಡಬ್ಬ ಎಣ್ಣೆಯನ್ನು ಸಾಗಿಸುತ್ತಿರುವಾಗ ಹಿಡಿದುಕೊಟ್ಟಿರುವರು. ಈ ಬಗ್ಗೆ ಜಿಲ್ಲಾಧಿಕಾರಿ, ಸಮಾಜ ಕಲ್ಯಾಣ ಮಂತ್ರಿ ಸಮಾಜ ಕಲ್ಯಾಣ ಇಲಾಖೆಯ ಡೈರೆಕ್ಟರ್, ಮತ್ತು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ತಿಳಿಸಲಾಗಿದೆ. ಆದರೂ ಇದುವರೆಗೂ ಯಾವ ಕ್ರಮವನ್ನು ತೆಗೆದುಕೊಂಡಿಲ್ಲ. ಯಥಾ ಪ್ರಕಾರ ಈ ತರದ ಗುಪ್ತರವಾನೆ ಸಾಗುತ್ತಲೇ ಇದೆ. ಸರಕಾರಿ ಅಧಿಕಾರಿಗಳೇ ಇವಕ್ಕೆಲ್ಲ ಸಾಮೀಲಾಗಿ ಉತ್ತೇಜನ ಕೊಡುತ್ತಿರುವಾಗ ಇಂಥವಕ್ಕೆಲ್ಲ ಕೊನೆ ಎಂದು ಅಂತ ಅಲ್ಲಿನ ದಲಿತರು ಹೇಳುವರು.

---

## ತಾಸಿಲ್ದಾರ ಜಮೀನು ಮಂಜೂರು ಮಾಡಿದ; ಅರಣ್ಯಾಧಿಕಾರಿ ಅಲ್ಲಿ ನೀಲಗಿರಿ ಸಸಿನೆಟ್ಟ

[ನಮ್ಮ ಪ್ರತಿನಿಧಿಯಿಂದ]

ಇದು ನಡೆದದ್ದು ಭದ್ರಾವತಿ ತಾಲ್ಲೂಕಿನ ಕಾಳಿಂಗನ ಹಳ್ಳಿಯಲ್ಲಿ. 26-5-65 ರಲ್ಲಿ ಭದ್ರಾವತಿ ತಾಲ್ಲೂಕು ಆಫೀಸಿನಿಂದ ಸೀಗೆಬಾಗಿ ಭೂರಹಿತ ಹತ್ತುಜನ ಬಡ ಹರಿಜನರಿಗೆ ಈರೀತಿ ನೋಟೀಸು ಬಂದಿತು "ಈ ಮೂಲಕ ತಿಳಿಯಪಡಿಸುವುದೇನೆಂದರೆ ನಿಮಗೆ ಕಾಳಿಂಗನಹಳ್ಳಿ ಗ್ರಾಮದ ಸರ್ವೆ ನಂಬರ್ 1ರಲ್ಲಿ 2 ಎಕ್ರೆಖುಷ್ಕಿ ಜಮೀನ್ D.C. ಸಾಹೇಬರವರ ಹುಕುಂ ನಂ. D. DIS M4C 3153-246165 ರಲ್ಲಿ ತಾ|| 15-11-'4 ಪ್ರಕಾರ ಮಂಜೂರಾಗಿದೆ. ಮತ್ತು ಎಕೆರೆ ಒಂದಕ್ಕೆ 25 00ರೂ ನಂತೆ ಜಮೀನ್ ಕಿಮ್ಮತ್ತು ವಜಾಮಾಡಿದ್ದಾರೆ. ಈ ನೋಟೀಸು ಜಾರಿಯಾದ 15 ದಿವಸಗಳೊಳಗೆ 20-00ರೂ. ಪೋಡಿ ಫೀಜು ಮತ್ತು 31-50ರೂ. ಮಾಲ್ಕಿ ಕಿಮ್ಮತ್ತು ಒಟ್ಟು 51-50ರೂ. ಗಳನ್ನು ತಾಲ್ಲೂಕು ಖಜಾನೆಗೆ ಜಮಾ ಮಾಡಿಸಿ ಚಲನನ್ನು ಹಾಜರು ಪಡಿಸಿ ಸಾಗುವಳಿಚೀಟಿ ಪಡೆಯತಕ್ಕದ್ದು.

ತಾಸಿಲ್ದಾರರ ಅಜ್ಞೆಯ ಪ್ರಕಾರ ಹರಿಜನರು ಜಮೀನಿನ ಕಿಮ್ಮತ್ತು ಕಟ್ಟಿ ಸಾಗುವಳಿ ಚೀಟಿ ಪಡೆದರು. ಸಾಗುವಳಿ ಚೀಟಿ ಪಡೆಯಲು ಅವರು ಎರಡು ವರ್ಷ ಸತತವಾಗಿ ತಾಸಿಲ್ದಾರರ ಆಫೀಸಿಗೆ ಓಡಾಡಬೇಕಾಯಿತು. ಆ ಕಾಲಕ್ಕೆ ಕಾಳಿಂಗನಹಳ್ಳಿ ಸುತ್ತ ಮುತ್ತ ವಿಪರೀತ ಕಾಡು ಹಬ್ಬಿದ್ದರಿಂದ ಬಡ ಹರಿಜನರು ಕಾಡನ್ನು ಕಡಿದು ಭೂಮಿಯನ್ನು ಸಾಗುವಳಿ ಯೋಗ್ಯ ಮಾಡಲು ಎರಡು ವರ್ಷ ಕಲ್ಲುಗುದ್ದಿ ನೀರು ತೆಗೆಯಬೇಕಾಯಿತು. ಅವರ ಕಣ್ಣು ಬೆಳ್ಳಿಗಾಡವು. ತಮ್ಮ ಶ್ರಮ ಫಲವಾಯಿತು. ಇನ್ನೇನು ಭೂಮಿಗೆಯ್ದು ಹೊಟ್ಟೆ ತುಂಬ ಅನ್ನಬೆಳೆದುಕೊಳ್ಳಹುದು ಎನ್ನುವಷ್ಟರಲ್ಲಿ ಭದ್ರಾವತಿ ಅರಣ್ಯಾಧಿಕಾರಿಯಿಂದ 6-8-70 ರಲ್ಲಿ ಒಂದು ಆಜ್ಞೆ ಬಂತು –"ಸರ್ಕಾರ ಈಗ ಖಾಲಿ ಇರುವ ಜಮೀನಿನಲ್ಲಿ ನೀಲಗಿರಿ ಸಸಿ

(6ನೇ ಪುಟಕ್ಕೆ)

ಬುಡಸಮೇತ ನಿರ್ಮೂಲನಗೊಳಿಸಲು

# ಹರಿಜನ ಹತ್ಯಾಕಾಂಡ

ಕೆನಾಡಿಯಾ ಎಂಬ ಹಳ್ಳಿಯು ಮಧ್ಯ ಪ್ರದೇಶದಲ್ಲಿದೆ. ಅಲ್ಲಿಗೆ ರಸ್ತೆ ಸಂಪರ್ಕ ವಿಲ್ಲ. ತಾಲ್ಲೂಕುಕೇಂದ್ರವಾದ ಅಲೋಟ್‌ಗೆ ಜೋಡೆತ್ತಿನ ದಾರಿಯೂ ಇಲ್ಲ. ಮಳೆಗಾಲದಲ್ಲಂತೂ ದಾರಿ ಪೂರ್ಣ ಕಡಿದು ಹೋಗಿರುತ್ತದೆ.

ಈ ಹಳ್ಳಿಯಲ್ಲಿ 321 ಜನಸಂಖ್ಯೆ ಇದೆ. ಅದರಲ್ಲಿ 14 ಸಂಸಾರಗಳು ಚಮ್ಮಾರ್ ಎಂಬ ಕೀಳು ವರ್ಗಕ್ಕೆ ಸೇರಿದಂತ ಸಂಸಾರಗಳು. ಈ ಕೆಳವರ್ಗದ ಸಂಸಾರಗಳ ಸುಳಿವು ಮೇಲ್ವರ್ಗದವರಿಗೆ ಸಹಿಸಲಸಾಧ್ಯ

ರಾಮು, ಅಮರ, ರೂಪ ಮತ್ತು ರಾಮ ಚಂದ್ರರಿಗೆ ಆಗಿನ ಸರ್ಕಾರ 1976ರಲ್ಲಿ ಭೂಮಿಯನ್ನು ಹಂಚಿತು. ಅಂದಿನಿಂದ ಸವರ್ಣೀಯರ ಹೃದಯದಲ್ಲಿ ಜಾತಿ ಭಾವನೆ ಕುದಿಯತೊಡಗಿತು.

ಆಗಸ್ಟ್ 4 ರಂದು ಆ ಹಳ್ಳಿಯ ಸವರ್ಣೀಯರು ಒಂದು ದೇವಸ್ಥಾನದಲ್ಲಿ ಸಭೆ ಸೇರಿ ಹರಿಜನರನ್ನು ಬುಡಸಮೇತ ನಿರ್ಮೂಲನ ಮಾಡಲು ನಿರ್ಧರಿಸಿದರು.

ಸವರ್ಣೀಯರು ಅದೇ ದಿನ ತಮ್ಮ ದನ ಕರುಗಳನ್ನು ಹರಿಜನರ ಬೆಳೆಗೆ ಬಿಟ್ಟು ಮೇಯಿಸಿದರು. ಹರಿಜನರು ಅದನ್ನು ಪ್ರತಿಭಟಿಸಿದಾಗ ಸವರ್ಣೀಯರು ಅವರನ್ನು ಮಾರಕ ಆಯುಧಗಳಿಂದ ಹೊಡೆದು ಗಾಯಗೊಳಿಸಿದರು.

ಮತ್ತು ಕೆಲವು ನಿಮಿಷಗಳಲ್ಲಿಯೇ ನಾಲ್ಕು ಜನರನ್ನು ಕತ್ತರಿಸಿದರಲ್ಲದೆ, 17 ಜನರನ್ನು ಚೆನ್ನಾಗಿ ಹೊಡೆದು ಅವರು ಅಸಮರ್ಥರಾಗುವಂತೆ ಮಾಡಿದರು. ಅಲ್ಲದೆ ಅವರ ಹೆಂಗಸರ ಗುಪ್ತಾಂಗಗಳಿಗೆ ದೊಣ್ಣೆಗಳನ್ನು ತೂರಿಸಲಾಯಿತು. ಈ ಬಗ್ಗೆ ಪೋಲೀಸರಿಗೆ ದೂರು ಕೊಟ್ಟರೂ ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ನೊಂದವರಿಗೆ ಯಾವುದೇ ವೈದ್ಯಕೀಯ ಸಹಾಯವನ್ನೂ ನೀಡಲಾಗಲಿಲ್ಲ.

ಇದರ ಜೊತೆಗೆ ಹಣವಂತ ಹರಿಜನನಾದ ಓಂಕಾರ್ ಚಮ್ಮಾರ್ ಮತ್ತು ಆತನ 21 ವರ್ಷದ ಮಗ ರತನ್ ಎಂಬುವವರನ್ನು ಕೊಲ್ಲಲಾಯಿತು. ಮತ್ತು ಓಂಕಾರ್ ಚಮ್ಮಾರನ ಮೂರನೇ ಮಗ 17 ವರ್ಷ ವಯಸ್ಸಿನ ಬಾಬು ಎಂಬುವನನ್ನೂ ಹೊಡೆದು ಆತನ ಮೈಯೆಲ್ಲಾ ಛಿದ್ರವಾಗಿದ್ದ ಕಾರಣ ಆಸ್ಪತ್ರೆಗೆ ಸೇರಿಸಲಾಗಿದೆ.

ನಲವತ್ತು ವರ್ಷ ವಯಸ್ಸಿನ ಗುಲಾಬ್ ಎಂಬ ಹರಿಜನನು ತನ್ನ 15 ಜನರಿರುವ ಕುಟುಂಬವನ್ನು ಅನಾಥರನ್ನಾಗಿ ಮಾಡಿ ಸತ್ತಿದ್ದಾನೆ. ಜೊತೆಗೆ ಈ ಘರ್ಷಣೆಯಲ್ಲಿ ಸಿಕ್ಕಿ ಗುಲಾಬ್‌ನ ತಾಯಿ ರಾಮಾಬಾಯಿ ಮತ್ತು ತಂಗಿ ಕಸ್ತೂರಿ ತಮ್ಮ ಎರಡೂ ಕೈಗಳನ್ನು ಕಳೆದುಕೊಂಡು ಆಸ್ಪತ್ರೆಯಲ್ಲಿದ್ದಾರೆ.

ಈ ಎಲ್ಲ ಘಟನೆಗಳಿಗೂ ಕಾರಣವೇನೆಂದರೆ ಹಿಂದಿದ್ದ ಕಾಂಗ್ರೆಸ್ ಸರ್ಕಾರದಿಂದ ಭೂಮಿ ಹಂಚಿಕೆಯು ಸರಿಯಾಗಿ ಆಗಿಲ್ಲ ಎಂಬುದೇ ಆಗಿದೆ ಎಂದು ಜನತಾ ಮುಖ್ಯ ಮಂತ್ರಿ ಕೈಲಾಸಜೋಷಿ ವಿಧಾನಸಭೆಯಲ್ಲಿ ಹೇಳಿಕೆಕೊಟ್ಟಿದ್ದಾರೆ.

ಒಬ್ಬ ಹರಿಜನ ಸಮಾಜಸೇವಕನ ಹೇಳಿಕೆಯ ಪ್ರಕಾರ ಈ ಘಟನೆಯಲ್ಲಿ ಸತ್ತಂಥ ಎಲ್ಲ ಹರಿಜನರು ಕಾಂಗ್ರೆಸ್ಸನ್ನು ಬೆಂಬಲಿಸುತ್ತಿದ್ದು, ಚುನಾವಣೆಯ ನಂತರ ಕಾಂಗ್ರೆಸ್ ಸೋತು ಜನತಾ ಬಂದ ಮೇಲೆ ಈ ಘಟನೆಗಳು ನಡೆದಿವೆ.

ಈ ಘಟನೆ ನಡೆದ ಸ್ಥಳಕ್ಕೆ ಯಾವ ಒಬ್ಬ ಜನತೆಯ ಪ್ರತಿನಿಧಿಯೂ ಸಹ ಭೇಟಿಕೊಡಲು ನಿರಾಕರಿಸಿದರು. ಭೇಟಿ ಕೊಟ್ಟವರಲ್ಲಿ ಕಾಂಗ್ರೆಸ್ ವಿರೋಧ ಪಕ್ಷದ ಅರ್ಜುನ್‌ಸಿಂಗ್ ಎಂಬುವರು ಮತ್ತು ರಾಜ್ಯದ ಮಂತ್ರಿಗಳಾದ ಸುಕ್ರಾಂಪಟೇಲ್ ಎಂಬುವರು ವೀಕ್ಷಿಸಿ ನೊಂದಂಥ ಸಂಸಾರಗಳಿಗೆ ತಲಾ 300 ರೂ.ಗಳಂತೆ ಧನ ಸಹಾಯ ಮಾಡಲು ಭರವಸೆ ಕೊಟ್ಟಿದ್ದಾರೆ. [-ಬ್ಲಿಟ್ಜ್‌ನಿಂದ]

# ಪೋಲೀಸ್ ಪೇದೆಯಿಂದ ಅಪ್ರಾಪ್ತ ವಯಸ್ಸಿನ ಬಾಲಕಿಯ ಅತ್ಯಾಚಾರ

ಮಧ್ಯಪ್ರದೇಶದ ಜಬ್ಬಲ್‌ಪುರ ಜಿಲ್ಲೆಯ ಸಿಹೋರ್ ಪೋಲೀಸ್ ಸ್ಟೇಷನ್ನಿನ ಹೆಡ್‌ಕಾನ್ಸ್‌ಟೇಬಲ್ ಬಬ್ಬಲ್‌ಸಿಂಗ್ ಎಂಬುವನು ಅನಧಿಕೃತವಾಗಿ ಗೋಸಲ್‌ಪುರದಲ್ಲಿ ವಾಸಿಸುತ್ತಿರುವ ಬಡ ಆದಿವಾಸಿಯೊಬ್ಬರ ಮನೆಗೆ ರಾತ್ರಿ ವೇಳೆಯಲ್ಲಿ ನುಗ್ಗಿ 14 ವರ್ಷ ವಯಸ್ಸಿನ ಬಾಲಕಿಯನ್ನು ಊರಿನ ಹೊರಗಿರುವ ಕಾಡಿಗೆ ಎತ್ತಿಕೊಂಡು ಹೋಗಿ ಬಲವಂತವಾಗಿ ಸಂಭೋಗಿಸಿದ್ದಾನೆ.

ಈ ಹೆಡ್ ಕಾನ್ಸ್‌ಟೇಬಲ್‌ನ ನೀಚ ಕೃತ್ಯಕ್ಕೆ ಸಹಾಯ ಮಾಡಿದ ವ್ಯಕ್ತಿ ಅದೇ ಹಳ್ಳಿಯಲ್ಲಿ ಚಿಕ್ಕ ಅಂಗಡಿ ಇಟ್ಟುಕೊಂಡಿದ್ದ ಬೀರೇಂದ್ರ ಎಂಬುವನು. ಆದರೆ ಅವನೀಗ ತಲೆಮರೆಸಿಕೊಂಡಿದ್ದಾನೆ. ಹೆಡ್ ಕಾನ್ಸ್‌ಟೇಬಲ್‌ನನ್ನು ಈಗ ಅರೆಸ್ಟ್ ಮಾಡಿದ್ದು, ಕೆಲಸದಿಂದ ಸಸ್ಪೆಂಡ್ ಮಾಡಲಾಗಿದೆ.

ಈ ಘಟನೆ ನಡೆದದ್ದು ಜುಲೈ 14ರಂದು ಆ ರಾತ್ರಿ ಬಬ್ಬನ್‌ಸಿಂಗ್ ಮತ್ತು ಬಿರೇಂದ್ರ ಇಬ್ಬರೂ ಚೆನ್ನಾಗಿ ಕುಡಿದು ಆ ಆದಿವಾಸಿಯ ಮನೆಗೆ ನುಗ್ಗಿ ಮನೆಯಲ್ಲಿದ್ದ ಮಹಿಳೆಯನ್ನು ಹೆದರಿಸಿ ಆವಳ ಪ್ರತಿಭಟನೆಯನ್ನು ಲೆಕ್ಕಿಸದೆ ಆ ಬಾಲಕಿಯನ್ನು ಅಪಹರಿಸಿದ್ದಾರೆ.

ಆಮೇಲೆ ಪೋಲೀಸ್ ಅಧಿಕಾರಿಗಳಿಗೆ ಈ ಬಾಲಕಿ ಕೊಟ್ಟಿರುವ ದೂರಿನ ಪ್ರಕಾರ ಇಬ್ಬರೂ ಸಹ ಆಕೆಯನ್ನು ಬಲವಂತವಾಗಿ ಸಂಭೋಗಿಸಿದ್ದು, ಆ ಬಾಲಕಿಯು ಇದನ್ನು ಪ್ರತಿಭಟಿಸಿ ಕಿರುಚಲುತೊಡಗಿದಾಗ ಆಕೆಯ ಬಾಯಿಗೆ ಬಟ್ಟೆ ತುರುಕಿ ಸಂಭೋಗಿಸಿದರೆಂದು ಗೊತ್ತಾಗಿದೆ. ಕೊನೆಗೆ ಅಳುತ್ತಿದ್ದ ಈ ಹುಡುಗಿಯನ್ನು ಊರಿನ ಹಿರಿಯರು ದೇವಸ್ಥಾನದ ಹತ್ತಿರ ಪತ್ತೆ ಹಚ್ಚಿದರು. [-ಬ್ಲಿಟ್ಜ್‌ನಿಂದ]

● ಪಟನಾ : ಕಾಂಗ್ರೆಸ್ ಆಡಳಿತದಲ್ಲಿದ್ದಾಗ ಪೋಲೀಸರು ಸಮಸ್ತಿಪುರ ಜಿಲ್ಲೆಯ ರೊಸೇರ ಪೋಲೀಸ್ ಠಾಣೆಯ ವ್ಯಾಪ್ತಿಗೆ ಸೇರಿದ ಗ್ರಾಮವೊಂದರಲ್ಲಿ 18 ವರ್ಷದ ಹುಡುಗನೊಬ್ಬನನ್ನು ಕೊಂದಿದ್ದಾರೆ.

ಬಿಹಾರ ಮುಖ್ಯಮಂತ್ರಿ<br>
–ಕರ್ಪೂರೀಠಾಕೂರ್•<br>
ವಿಧಾನಸಭೆಯಲ್ಲಿ ಪ್ರಸ್ತಾಪ.<br>
-ಪ್ರಜಾವಾಣಿ 6, ಜುಲೈ 1977

● ಕಟಕ್ : ಕಟಕ್ ಜಿಲ್ಲೆಯ ಜಾಜ್ಪುರ ಟೌನ್ ಬಳಿಯ ಬದಬಂತೆ ಗ್ರಾಮದಲ್ಲಿ ಹರಿಜನರ ಬಸ್ತಿ ಮೇಲೆ ಸುಮಾರು 200 ಮಂದಿ ಗುಂಪೊಂದು ಲಾಠಿ, ಭರ್ಜಿ ಹಿಡಿದು ದಾಳಿ ಮಾಡಿ ಹದಿನಾಲ್ಕು ಗುಡಿಸಿಲುಗಳನ್ನು ಹಾಳು ಮಾಡಿ, ಹರಿಜನ ಮಹಿಳೆಯರನ್ನು ಬೈದು ಗುಡಿಸಲಿನಲ್ಲಿದ್ದ ಪಾತ್ರೆ – ಪಡಗಗಳನ್ನು ಒಡೆದು ಹಾಕಿದ್ದು, 18 ಮಂದಿಯನ್ನು ಗಾಯಗೊಳಿಸಿದೆ.

ಪ್ರಜಾವಾಣಿ 14, ಜುಲೈ 1977

● ಬಿಹಾರದ ಭಾಗಲ್ಪುರ ಜಿಲ್ಲೆಯ ಪಥದ ಗ್ರಾಮದ ಭೂಮಾಲೀಕರು ಹರಿಜನ ಗ್ರಾಮಕ್ಕೆ ಹೋಗಿ ಹೊಲ-ಗದ್ದೆಗಳ ಕೆಲಸಕ್ಕೆ ಬರುವಂತೆ ಅವರನ್ನು ಕರೆದರೆಂತಲೂ ಅವರು ನಿರಾಕರಿಸಿದಾಗ ಭೂಮಾಲೀಕರೆ ಅವರನ್ನು ದೊಣ್ಣೆಗಳಿಂದ ಹೊಡೆದುದಲ್ಲದೆ ಕೆಲವು ಮಹಿಳೆಯರೂ ಸೇರಿದಂತೆ ಹರಿಜನರನ್ನು ಅಲ್ಲಿನ ಮಾಧ್ಯಮಿಕ ಶಾಲೆಯಲ್ಲಿ ಬಂಧಿಟ್ಟರು.

ರಾಜ್ಯ ಸಭೆಯಲ್ಲಿ ಚರಣ್‌ಸಿಂಗ್<br>
–ಪ್ರಜಾವಾಣಿ 22 ಜುಲೈ 1977

● ಮಧ್ಯಪ್ರದೇಶ: ಆಗಸ್ಟ್ 4 77 ರಲ್ಲಿ ರಾಟ್ಲಂ ಜಿಲ್ಲೆಯ ಕಾನಡಿ ಎಂಬ ಹಳ್ಳಿಯಲ್ಲಿ ಸವರ್ಣೀಯರು ಹರಿಜನರ ಭೂಮಿಯನ್ನು ಅಕ್ರಮವಾಗಿ ಆಕ್ರಮಿಸಿಕೊಂಡದ್ದರ ಪರಿಣಾಮ ಎರಡೂಗುಂಪಿಗೂ ಘರ್ಷಣೆ ನಡೆದು ನಾಲ್ಕುಜನ ಹರಿಜನರು ಕೊಲೆಯಾಗಿದ್ದಾರೆ. —ಇಂಡಿಯನ್ ಎಕ್ಸಪ್ರೆಸ್ 7.ಆಗಸ್ಟ 1977

● ಬೆಂಗಳೂರು: ಆಗಸ್ಟ್ 13 ರಂದ ಹೊಸಕೋಟೆಯ ಸೋಮಲಾಪುರಗ್ರಾಮದ ಸವರ್ಣೀಯರು ತಮ್ಮಜಮೀನಿಗೆ ದನಬಂತು ಎನ್ನುವ ಕಾರಣಕ್ಕಾಗಿ ಪಕ್ಕದ ಬಾಣರ ಹಳ್ಳಿಯ ಇಬ್ಬರು ಹರಿಜನರನ್ನು ಮಚ್ಚು ದೊಣ್ಣೆಗಳಿಂದ ಹೊಡೆದು ತೀವ್ರವಾಗಿ ಗಾಯಗೊಳಿಸಿದ್ದಾರೆ.

-ಪ್ರಜಾವಾಣಿ 18 ಆಗಸ್ಟ್ 1977

● ಬೆಂಗಳೂರು : ಗೌರಿಬಿದನೂರು ತಾಲ್ಲೂಕುಸಾಗಸಂದ್ರ ಗ್ರಾಮದಲ್ಲಿ ಕೆಲವು ದೌರ್ಜನ್ಯಕಾರರು ಹಗಲಲ್ಲೆ ಹರಿಜನಯುವಕ ಕದಿರಪ್ಪ ಎಂಬುವರ ಮನೆಯಮೇಲೆ ಹಲ್ಲೆ ಮಾಡಿ ಅವನನ್ನು ಪಂಚಾಯಿತಿ ಕಚೇರಿಗೆ ಎಳೆತಂದು ಆತನ ತಮ್ಮ ನಂಜುಂಡಪ್ಪನನ್ನು ಹೊಡೆದುಕೊಲ್ಲಲಾಗಿದೆ.

- ಪ್ರಜಾವಾಣಿ 27 ಆಗಸ್ಟ್ 1977.

● ಬೆಂಗಳೂರು : ಸಾಗರ ತಾಲೂಕಿನ ಕೆರೆಹಿತ್ತಲು ಗ್ರಾಮದಲ್ಲಿ ಜುಲೈ 16ರಂದು ಸವರ್ಣೀಯ ಕುಟುಂಬದ ಗುಂಪೊಂದು ಹರಿಜನ ಕುಟುಂಬದ ಮೇಲೆ ಹಲ್ಲೆಮಾಡಿ ಶ್ರೀಮತಿ ಜಯಮ್ಮ,ಚೆನ್ನಪ್ಪ ನಾಗರಾಜು ಅವರನ್ನು ಚೆನ್ನಾಗಿ ಹೊಡೆದು ಗಾಯಗೊಳಿಸಿದ್ದಾರೆ. –ದಲಿತ ಕ್ರಿಯಾ ಸಮಿತಿ ಹೇಳಿಕೆ.

- ಪ್ರಜಾವಾಣಿ 28 1977

## ದಾಖಲೆಗಳು

● ಬೆಂಗಳೂರು : ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲೂಕು, ಹೆಚ್. ನಾಗಸಂದ್ರ ಗ್ರಾಮದಲ್ಲಿ ಆಗಸ್ಟ್ 21 ರಂದು ಹರಿಜನ ವ್ಯಕ್ತಿ ನಂಜುಂಡಪ್ಪ ಎಂಬುವರನ್ನು ಅದೇ ಗ್ರಾಮದ 20 ಮಂದಿ ಸವರ್ಣೀಯರು ನಡುಹಗಲಿನಲ್ಲೇ ಆಯುಧಗಳಿಂದ ಹೊಡೆದು ಗಾಯಗೊಂಡು ಕೆಳಗೆಬಿದ್ದಾಗ ಮತ್ತೆ ಆತನನ್ನು ಪಂಚಾಯಿತಿ ಕಛೇರಿಗೆ ತೆಗೆದುಕೊಂಡು ಹೋಗಿ ಅಲ್ಲಿ ಆತನ ಎರಡು ಕೈಗಳನ್ನು ಹಿಡಿದುಕೊಂಡು ಆತನ ಅರ್ಧಕತ್ತನ್ನು ಕೊಯ್ದು, ಸಮೀಪದ ಒಂದು ಮನೆಗೆ ತೆಗೆದುಕೊಂಡು ಹೋಗಿ ಪುನಃ ಆತನಿಗೆ ಚಿತ್ರಹಿಂಸೆಕೊಟ್ಟು ಕೊಂದಿದ್ದಾರೆ.

ಈ ಹಂತಕರ ಗುಂಪಿನವರೇ ದೊಡ್ಡ ಕುರುಗೋಡು ಗ್ರಾಮದ ಹರಿಜನರ ನಾಲ್ಕು ಕುಟುಂಬಗಳನ್ನು ಹೊರದೂಡಿ ಬಸ್ತಮ್ಮ ಎಂಬ ಹೆಂಗಸನ್ನು ಮಾನಭಂಗ ಮಾಡಿ ಆಕೆಯ ತಾಳಿ ಮತ್ತು ಹಣವನ್ನು ಕಸಿದುಕೊಂಡು ಅವರ ಬೆಳೆಯನ್ನು ನಾಶಮಾಡಿದೆ.

–ದಲಿತ ಕ್ರಿಯಾ ಸಮಿತಿ ಹೇಳಿಕೆ.<br>
– ಕನ್ನಡ ಪ್ರಭ 4 ಸೆಪ್ಟೆಂಬರ್ 1977

● ಕಲ್ಬುರ್ಗಿ : ಚಿತ್ತಾಪುರ ತಾಲೂಕಿನ ಹೊಸೂರು ಗ್ರಾಮದ ಹರಿಜನವಾಡಿಗೆ ಸೆ. 13 ರಂದು ಗ್ರಾಮದ ಕೆಲವು ಗೂಂಡಾಗಳು ನುಗ್ಗಿ ಮಲ್ಲಪ್ಪ ಅಡಗಲ ಎಂಬಾತನನ್ನು ಗ್ರಾಮದೊಳಕ್ಕೆ ಎಳದುಕೊಂಡುಹೋಗಿ, ಆತನ ಎರಡು ಕಣ್ಣು ಗುಡ್ಡೆಗಳನ್ನು ಕಿತ್ತು ಹಾಕಿ ಅಮಾನುಷವಾಗಿ ಹೊಡೆದಿದ್ದಾರೆ.

- ಶಿವರಾಮ ಮೋಘ,ರಿಪಬ್ಲಿಕನ್‌ಪಕ್ಷ(ಖೋಬರ್ ಗಡೆ)ದ ಅಧ್ಯಕ್ಷರು.

ಪ್ರಜಾವಾಣಿ 13 ಸೆ. 1977

● ಉದಕಮಂಡಲ : ನಡುವಟ್ಟಂನ ಸರ್ಕಾರಿ ಹರಿಜನ ಕ್ಷೇಮಾಭಿವೃದ್ಧಿ ಶಾಲೆಯ ಮುಖ್ಯೋಪಾಧ್ಯಾಯ ಎಲ್.ರಾಮನ್‌ರವರು ಸ್ನೇಹಿತರ ಜೊತೆ ರಾತ್ರಿ ಮನೆಗೆ ಹೋಗುತ್ತಿದ್ದಾಗ ಅವರನ್ನು ಹಿಂದಿನಿಂದ ಗುಂಡಿಕ್ಕಿ ಕೊಲ್ಲಲಾಗಿದೆ.

– ಪ್ರಜಾವಾಣಿ 14 ಸೆ.1977

● ಬೆಂಗಳೂರು : ದೇವನಹಳ್ಳಿ ತಾಲ್ಲೂಕಿನ ಚನ್ನರಾಯಪಟ್ಟಣ ಹೋಬಳಿಯ ಚೀಮಾಸನಹಳ್ಳಿಯಲ್ಲಿ ಕಳೆದ ಭಾನವಾರ ಸವರ್ಣೀಯರು ಹರಿಜನರೊಬ್ಬರ ಮನೆಗೆ ಬೆಂಕಿ ಇಟ್ಟು, ಮುನಿವೆಂಕಟಪ್ಪನನ್ನು ಥಳಿಸಿ ಅವರ ಪತ್ನಿ ಅಕ್ಕಯ್ಯಮ್ಮ ಹಾಗು ತಂಗಿ ಚಿಕ್ಕೋಳಮ್ಮ ಅವರನ್ನು ಮಾನಭಂಗ ಮಾಡಿದ್ದಾರೆ. ಇದರಿಂದ ಗಾಬರಿಗೊಂಡ 30ಮಂದಿಹರಿಜನ ಕುಟುಂಬಗಳು ಪ್ರಾಣದಾಸೆಯಿಂದ ಬೆಂಗಳೂರಿಗೆ ತಲೆಮರಸಿಕೊಂಡು ಬಂದಿದ್ದಾರೆ.

–ದಲಿತ ಕ್ರಿಯಾ ಸಮಿತಿ ಹೇಳಿಕೆ.<br>
– ಪ್ರಜಾವಾಣಿ 22 ಸೆ. 1977

● ತಿರಪತಿ: ಚಿತ್ತೂರು ಜಿಲ್ಲೆಯ ವಯಲಪಾಡ ತಾಲೂಕಿನ ಒಂದುಹಳ್ಳಿಯಲ್ಲಿ ಸವರ್ಣೀಯರ ಗುಂಪು ಸುಗುಳಿಗಿರಿಜನನಾಯಕನೊಬ್ಬನ ಎರಡು ಕೈಗಳನ್ನು ಕಡಿದುಹಾಕಿ ಆತನ ಪತ್ನಿಯ ಮೇಲೆ ಹಲ್ಲೆ ಮಾಡಿದೆ.

–ಉದಯವಾಣಿ 19 ಸೆ. 1977

# ಸಂಘಟನೆಯ ಸಮ್ಮೇಳನ ವರದಿ

(1ನೇ ಪುಟದಿಂದ)

ಆರ್. ಶಿವಣ್ಣ, ಎಂ. ಡಿ. ಗಂಗಯ್ಯ, ಎಂ. ಚನ್ನಕೇಶವಯ್ಯ, ಕೆ. ಭದ್ರಯ್ಯ, ವಿಜಯ ಪಾಟೀಲ್ ಮತ್ತು ಶಿವತೀರ್ಥನ್ ಕವನ ಓದಿದರು.

○ ○ ○

ಕ್ರಾಂತಿಗೀತೆಯೊಂದಿಗೆ ಮಧ್ಯಾಹ್ನ ವಿಚಾರ ಸಂಕಿರಣ ಕಾರ್ಯಕ್ರಮ ಆರಂಭವಾಯಿತು. ಶ್ರೀ ಬಿ. ಕೃಷ್ಣಪ್ಪ ಅಧ್ಯಕ್ಷತೆ ವಹಿಸಿದ್ದರು.

ಶ್ರೀ ವೆಂಕಟೇಶ್ ಅವರು "ದಲಿತರು ಮತ್ತು ದೌರ್ಜನ್ಯ'ದ ಬಗ್ಗೆ ಮಾತನಾಡುತ್ತ ಕೆಲವು ದೌರ್ಜನ್ಯಗಳ ವಿವರಣೆಗಳನ್ನು ಕೊಟ್ಟರಲ್ಲದೆ, ಜಮೀನ್ದಾರಿ, ಬಂಡವಾಳಶಾಹಿ ವ್ಯವಸ್ಥೆ ಇರುವ ತನಕ ದಲಿತರ ಮೇಲೆ ದಬ್ಬಾಳಿಕೆ ದೌರ್ಜನ್ಯಗಳು ನಡೆಯುತ್ತಲೇ ಇರುತ್ತವೆ, ಯಾವಾಗ ಜಮೀನ್ದಾರಿ, ಬಂಡವಾಳಶಾಹಿ ವ್ಯವಸ್ಥೆ ಕೊನೆಗೊಳ್ಳುತ್ತದೋ ಆಗ ದಲಿತರು ಯಾರ ಭಯವೂ ಇಲ್ಲದೆ ಬದುಕಬಹುದು ಎಂದರು. ಅವರು ಮಾತನಾಡುತ್ತಿದ್ದಾಗ ಮಧ್ಯೆ ಸಭೆಯಲ್ಲಿ ಕೆಲವು ಕಾರ್ಯಕರ್ತರು ಚಿಕ್ಕಮಗಳೂರು ಎಂ.ಎಲ್.ಎ. ಜಿ. ಪುಟ್ಟಸ್ವಾಮಿ ವಿರುದ್ಧ ಘೋಷಣೆ ಕೂಗುತ್ತಿದ್ದರು.

ಈ ದೇಶದ ರಾಜಕೀಯ-ಸಾಮಾಜಿಕ, ಆರ್ಥಿಕ ಶಕ್ತಿಗಳು ಹಳ್ಳಿಯ ಜನರಿಗೂ ತಲುಪುವಂತೆ ಮಾಡುವ ವ್ಯವಸ್ಥೆ ವಿಕೇಂದ್ರೀಕರಣ. ಈ ದೇಶದಲ್ಲಿ ಶೇಕಡ 80% ಬರೀ ಅನಕ್ಷರಸ್ಥರೇ ಇರುವುದರಿಂದ, ಮತ್ತು ಇಲ್ಲಿಯ ಜಾತಿ, ಅರ್ಥ ವ್ಯವಸ್ಥೆ ಮತ್ತು ಪೋಲೀಸು ಎಲ್ಲ ಬಂಡವಾಳಶಾಹಿಯನ್ನು ಬೆಂಬಲಿಸುವುದರಿಂದ ವಿಕೇಂದ್ರೀಕರಣ ದಲಿತರ ಪಾಲಿಗೆ ಅಪಾಯಕಾರಿ ಎಂದು "ದಲಿತರು ಮತ್ತು ವಿಕೇಂದ್ರೀಕರಣದ ಬಗ್ಗೆ ಮಾತಾಡಿದ ಶ್ರೀ ರುದ್ರಪ್ಪ ಹನಗವಾಡಿ ಹೇಳಿದರು.

"ಭಾರತದ ರಾಜ್ಯಾಂಗವೇ ಒಂದು ದೊಡ್ಡ ಮೋಸ. ರಾಜ್ಯಾಂಗದ ಉಪೋದ್ಘಾತವು ಆರ್ಥಿಕ, ಸಾಮಾಜಿಕ, ರಾಜಕೀಯ ಸಮಾನತೆಗಳನ್ನು ಘೋಷಣೆ ಮಾಡುತ್ತಿದ್ದರೂ ಅವು ಕಾರ್ಯಗತವಾಗಿಲ್ಲ. ದಲಿತರು ಮತ್ತು ರಾಜ್ಯಾಂಗದ" ವಿಷಯವಾಗಿ ಮಾತಾಡಿದ ಶ್ರೀ ಕಾಳಪ್ಪ ಅವರು 'ನಾವು ರಾಜ್ಯಾಂಗದ ಕಾನೂನು ಕಟ್ಟುಗಳಿಂದ ಉದ್ಧಾರವಾಗುವುದಿಲ್ಲ. ಈಗ ನಾವು ಸಮಾನತೆ ನಿರ್ಮಿಸುವ ಹೋರಾಟದ ದಿಕ್ಕಲ್ಲಿ ಯೋಚಿಸಬೇಕಾಗಿದೆ' ಎಂದರು.

ದಲಿತರು ಮತ್ತು ಸಂಘಟನೆ"ಯ ಬಗ್ಗೆ ಮಾತನಾಡಿದ ಶ್ರೀ ತಿರುಮಲೇಶ್ ಅವರು "ಭಾರತೀಯರನ್ನು ಒಡೆದು ಆಳುವ ನೀತಿ ಆಂಗ್ಲರದಾಗಿದ್ದಂತೆ ದಲಿತರ ಬಗ್ಗೆ ಸವರ್ಣೀಯರ ನೀತಿ ಅದೇ ಆಗಿದೆ. ದಲಿತ ನಾಯಕರುಗಳು ಕೂಡ ಅಧಿಕಾರ ಗದ್ದುಗೆಗಳಿಗಾಗಿ ಪಂಗಡ ವೈಶಮ್ಯ ಬೆಳೆಸುತ್ತಿದ್ದು ದಲಿತರ ಒಗ್ಗಟ್ಟು ನಾಶವಾಗಿದೆ. ಬಡ ದಲಿತರು ತಮ್ಮವರೇ ಆಗಿರುವ, ತಮ್ಮ ಅಧಿಕಾರದ ಗದ್ದುಗೆಗಾಗಷ್ಟೇ ಪಂಗಡ ಜಾತಿಯನ್ನು ಬಳಸಿಕೊಳ್ಳುತ್ತಿರುವ ನಾಯಕರುಗಳ ಹಿಂದೆ ಹೋಗದೆ, ತಮ್ಮ ತಮ್ಮಲ್ಲಿಯ ಭಿನ್ನಬೇಧಗಳನ್ನು ಮರೆತು ಎಲ್ಲರಿಗೂ ಅನ್ನ ಬಟ್ಟೆ ಸಿಗುವ ವ್ಯವಸ್ಥೆಯ ನಿರ್ಮಾಣದಲ್ಲಿ ತೊಡಗಲು ಸಂಘಟಿತರಾಗಬೇಕಾಗಿದೆ" ಎಂದರು.

"ದಲಿತ ಮಹಿಳೆ"ಯರ ಬಗ್ಗೆ ಮಾತನಾಡುತ್ತ ಕುಮಾರಿ ಮೊಟಮ್ಮನವರು ಅಜ್ಞಾನ ಅನಕ್ಷರತೆ ಮೂಢನಂಬಿಕೆಗಳಿಂದಾಗಿ ದಲಿತ ಸ್ತ್ರೀ ಹಿಂದುಳಿಯಲು ಕಾರಣವಾಗಿದೆ. ವಿದ್ಯಾಭ್ಯಾಸ ಹಾಗೂ ಪ್ರೋತ್ಸಾಹವಿಲ್ಲದೆ ದಲಿತ ಮಹಿಳೆಯರ ಉದ್ಧಾರ ಕನಸಿನ ಗಂಟಾಗುತ್ತದೆ ಎಂದರು.

"ದಲಿತರು ಮತ್ತು ಕೈಗಾರಿಕೆ"ಯ ಬಗ್ಗೆ ಶ್ರೀ ಶ್ರೀನಿವಾಸ್ ಮಾತನಾಡಿ ಇಂದು ಚರ್ಮ ಹದ ಮಾಡುವುದು, ಬುಟ್ಟಿ-ಚಾಪೆ ಹೆಣೆಯುವುದು ಅಷ್ಟೆ ದಲಿತರ ಕೈಗಾರಿಕೆಯಾಗಿದೆ ಎಂದರು.

ಅಧ್ಯಕ್ಷಭಾಷಣ ಮಾಡುತ್ತ ಶ್ರೀ ಬಿ. ಕೃಷ್ಣಪ್ಪ ಅವರು " ಹರಿಜನರ ಮೇಲಿನ ದಬ್ಬಾಳಿಕೆಯ ಹಿನ್ನೆಲೆ, ಹರಿಜನರಲ್ಲಿ ಕಾನೂನನ್ನು, ಹಕ್ಕನ್ನು ಪ್ರಶ್ನಿಸುವ, ಅದಕ್ಕಾಗಿ ಪ್ರತಿಭಟಿಸುವ ಅರಿವೇ ಆಗಿದೆ. ಇದು ದಲಿತರ ಸಂಘಟನೆಯನ್ನು ಹೆಚ್ಚು ಅರ್ಥಪೂರ್ಣಮಾಡೀತು. ಜಾತಿನಾಶ ಮಾಡಬೇಕಾಗಿರುವ ದಲಿತರು ಮೊದಲು ತಮ್ಮ ಒಳಪಂಗಡಗಳನ್ನು ನಾಶಮಾಡಬೇಕು. ಅಂತರ ಪಂಗಡ ಅಂತರ ಜಾತಿ ವಿವಾಹಗಳನ್ನು ಪ್ರೋತ್ಸಾಹಿಸಬೇಕು ಅವನ್ನು ವಿರೋಧಿಸುವುದರಿಂದ ದಲಿತರು ಪ್ರತಿಗಾಮಿಗಳಾಗುವ ಸಂಭವ ಉಂಟು. ಹಳ್ಳಿಮಟ್ಟದಲ್ಲಿ ಜಾತಿ-ವರ್ಗಗಳನ್ನು ನಾಶ ಮಾಡದೆ ವಿಕೇಂದ್ರೀಕರಣದ ಅನುಷ್ಠಾನ ದಲಿತರ ಪಾಲಿಗೆ ಹೆಚ್ಚು ಅಪಾಯಕಾರಿ" ಎಂದರು.

"ಮಾನವ ಶಕ್ತಿ ಹೆಚ್ಚಾಗಿರುವ ಭಾರತದಂಥಹ ದೇಶದಲ್ಲಿ ಬೃಹತ್ ಕೈಗಾರಿಕಾ ಬೆಳವಣಿಗೆ ಮತ್ತು ಖಾಸಗಿ ಉದ್ಯಮ ಅರ್ಥಹೀನ. ಆದ್ದರಿಂದ ದಲಿತರ ಉದ್ಧಾರವಾಗಬೇಕಾದರೆ ಆಸ್ತಿಯ ಹಕ್ಕುರದ್ದಾಗಿ ವ್ಯಕ್ತಿಯ ಸಮಾಜೀಕರಣವಾಗಬೇಕು ಇಂದಿನ ಆರ್ಥಿಕ ಸಮಾಜಿಕ ಪರಿಸರದಲ್ಲಿ ಆಸ್ತಿಯ ಒಡೆತನಪಡೆದವರಅಧಿಕಾರವನ್ನು ಕೈಯಲ್ಲಿಹಿಡಿದಿರುವುದಿಂದ, ಅವರಿಂದ ಆಸ್ತಿ ಕಿತ್ತುಕೊಳ್ಳುವುದು ಹುಡುಗಾಟವಲ್ಲ. ಅವರು ಆಸ್ತಿಯ ಹಕ್ಕಿನ ರದ್ದತಿಯ ಬಗ್ಗೆ ಮಾತನಾಡುತ್ತಿದ್ದರೂ ಅದು ಕೇವಲ ಘೋಷಣೆಯಾಗಿದ್ದು - ದಲಿತರು ಆಸ್ತಿಹಕ್ಕನ್ನು ಹೋರಾಟದಿಂದಲೇ ಕಿತ್ತುಹಾಕಬೇಕಾಗಿದೆ ಎಂದರು.

# ಪೋಲೀಸ್ ಕಸ್ಟಡಿಯಲ್ಲಿ ಅಮಾನುಷ ಚಿತ್ರಹಿಂಸೆ

ಪೋಲೀಸರಿಂದ ಚಿತ್ರಹಿಂಸೆಗೆ ಒಳಗಾದ ನಾರಾಯಣಪ್ಪನಿಗೆ ಅಮಾವಾಸ್ಯೆ ಮತ್ತು ಪೂರ್ಣಿಮೆಯ ದಿನ ಮೂರ್ಛೆ ಬರುತ್ತಿದ್ದು, 14 9-77 ರಂದು ಸಂಜೆ ಸಮಯದಲ್ಲಿ ಮೂರ್ಛೆ ಬಂದಿದ್ದಾಗ ತನ್ನ ತಾಯಿ ತನ್ನ ಹತ್ತಿರವಿರಲಿಲ್ಲವೆಂದು ಪ್ರಜ್ಞೆ ಬಂದ ನಂತರ ಆತ ತನ್ನ ತಾಯಿಯ ಜೊತೆ ಜಗಳವಾಡುತ್ತಿದ್ದ. ಇದನ್ನುಕಂಡ ಅದೇಕಾಲೋನಿಯ ಸವರ್ಣೀಯ ಅಂಗಡಿ ಪಾಪನ್ನ ತಾನು ಈ ಕಾಲೋನಿಯ ಜನರನ್ನು ತನ್ನ ಹದ್ದುಬಸ್ತಿನಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದು ಅದಕ್ಕೆ ಅಡ್ಡಿಯಾಗಿದ್ದ ನಾರಾಯಣಪ್ಪನ ಮೇಲೆ ಸೇಡು ತೀರಿಸಿಕೊಳ್ಳಲು ಈ ಸಂದರ್ಭವನ್ನು ಉಪಯೋಗಿಸಿಕೊಂಡು ಪೋಲೀಸ್‌ಗೆ ದೂರು ಕೊಟ್ಟ.

ಪೋಲೀಸ್‌ನವರು ಬಂದು, ನಾರಾಯಣಪ್ಪನನ್ನು ಪೋಲೀಸ್ ಠಾಣೆಗೆ ಬರಲು ಹೇಳಿದಾಗ ಆತ ನನ್ನ ಮನೆಯ ಜಗಳಕ್ಕೆ ನಾನು ಯಾಕೆ ಬರಲಿ ಎಂದು ಹೇಳಿದಾಗ ಪೋಲೀಸ್ ನಾರಾಯಣಪ್ಪ ಹರಿಜನ ಯುವಕ ನಾರಾಯಣಪ್ಪನಿಗೆ ಲಾಠಿಯಿಂದ ಹೊಡೆದಿರುವನು. ಹೊಡೆಯಬೇಡಿ ಎಂದು ಲಾಠಿ ಹಿಡಿದುಕೊಳ್ಳಲು ಹೋಗಿ ಪೋಲೀಸಿನವರ ಬಟ್ಟೆ ಸಿಕ್ಕಿ ಸ್ವಲ್ಪ ಹರಿದು ಹೋದಾಗ ಆತ "ನನ್ನಬಟ್ಟೆ ಹರಿದಿದ್ದೀಯ, ಇವನನ್ನು ಬಿಡಬಾರದು " ಎನ್ನುತ್ತ ಮತ್ತೊಬ್ಬ ಪೋಲೀಸ್ ಪೇದೆಯ ಸಹಾಯದಿಂದ ದಲಿತ ಯುವಕ ನಾರಾಯಣಪ್ಪನನ್ನು ನೆಲಕ್ಕೆ ಕೆಡವಿ ಕತ್ತಿನ ಮೇಲೆ ಒಂದು ಬೂಟ್ಸು ಕಾಲಿಟ್ಟು ಇನ್ನೊಂದು ಕಾಲನ್ನು ಬೀಜಗಳ ಮೇಲಿಟ್ಟು ತೋಳುಗಳಿಗೆ ಹಗ್ಗ ಬಿಗಿದು ಪೋಲೀಸ್ ಠಾಣೆಗೆ ಎಳೆದುಕೊಂಡು ಹೋಗಿರುವರು.

ಠಾಣೆಯಲ್ಲಿ ಹಗ್ಗ ಬಿಗಿಮಾಡಿ ಮಾಡಿ ತೋಳುಗಳಲ್ಲಿ ರಕ್ತಸುರಿಯುವಂತೆ ಮಾಡಿದ್ದು, ಪೇದೆ ನಾರಾಯಣಪ್ಪ "ನನ್ನಬಟ್ಟೆ ಹರಿಯುತ್ತೀಯೇನೋ ಎನ್ನುತ್ತ ಲಾಠಿಯಿಂದ ತೊಡೆಗಳಿಗೆ ರಕ್ತ ಕಿತ್ತು ಬರುವಂತೆ ಹೊಡೆದದ್ದರಲ್ಲದೆ, ದಫೇದಾರ ವೆಂಕಟೇಶರಆದೇಶದ ಮೇರೆಗೆ ಪಿ.ಸಿ. ನಂ. 26 ಈತ ಲಾಠಿಯಿಂದ ಮೊಣಕಾಲು-ಪಾದಗಳಿಗೆ ಮುಷ್ಠಿಯಿಂದ ಬಾರಿಸಿದ್ದು ಈಗ ಆತನಿಗೆ ಸರಿಯಾಗಿ ನಡೆಯುವುದಕ್ಕಾಗದೆ ಮೂಳೆ ಮುರಿದಿರುವ ಅನುಮಾನವಿದೆ. ಪೋಲೀಸರು ತನ್ನ ಅಣ್ಣನನ್ನು ಎಳೆದುಕೊಂಡು ಹೋದ ವಿಷಯ ತಿಳಿದು ಆತನ ತಂಗಿ ತನ್ನ ಗಂಡನ ಜೊತೆ ಪೋಲೀಸ್ ಠಾಣೆಗೆ ಬಂದಾಗ ಅವರನ್ನೂ ಸೇರಿಸಿ ಮೂವರನ್ನೂ ಪೋಲೀಸರುಕೋಲಾರದ ಸಬ್ ಜೈಲಿಗೆ ತಳ್ಳಿರುವರು. ಈ ಸಂದರ್ಭದಲ್ಲಿ ಕೋರ್ಟಿಗೆ ಹಾಜರಾಗಿದ್ದಾಗ ಇದೆಲ್ಲಾಹೇಳಿಕೊಂಡನಾರಾಯಣಪ್ಪ 'ನಾವು ಬಡವರು ಹೇಗೆ ಈ ಜೈಲಿನ ಕೋಣೆಯಿಂದ ಹೊರಬರುವುದೆಂದು ತಮ್ಮ ದುಃಖವನ್ನು ತೋಡಿಕೊಂಡರು.

ಪಂಚಮ ಪತ್ರಿಕೆಯ ಪ್ರತಿನಿಧಿಯಾದ ನಾನು ಈ ವಿಷಯತಿಳಿದ ಮಾರನೆಯದಿವಸ ಸ್ನೇಹಿತರೊಂದಿಗೆ ಈ ಬಗ್ಗೆ ವಿಚಾರಿಸಲು ಪೋಲೀಸ್ ಠಾಣೆಗೆಹೋದಾಗ ನನ್ನನ್ನುಪಿ.ಸಿ. ನಂ.1¹4 ಈತಕತ್ತಿಡಿದು ಠಾಣೆಯಿಂದಹೊರಕ್ಕೆ ತಳ್ಳಿರುವನು. ಮಾರನೆ ದಿವಸ ಚಿಕ್ಕಬಳ್ಳಾಪುರದ ಡಿ.ವೈ.ಎಸ್.ಪಿ. ಸ್ಥಳಕ್ಕೆ (ಚಿಂತಾಮಣಿ) ಬಂದಿದ್ದು ಅವರಿಗೆ ಈ ಎಲ್ಲ ವಿಷಯಗಳನ್ನು ತಿಳಿಸಲು ಅವರು 'ನೀವು ತರಲೆಹುಡುಗರು ಹೋಗ್ರೋ,ಹೋಗ್ರೋ'' ಎಂದು ಠಾಣೆಯಿಂದ ಹೊರಗೆ ಕಳಿಸಿದ್ದಾರೆ.

# . . . . . ಅಲ್ಲಿ ನೀಲಗಿರಿ ಸಸಿನೆಟ್ಟು

(3ನೇ ಪುಟದಿಂದ)

ನೆಡಿಸಬೇಕೆಂದು ಆಜ್ಞೆ ಮಾಡಿರುವುದರಿಂದ ನೀವು ನಿಮ್ಮ ಸಾಗುವಳಿ ಚೀಟಿಗಳನ್ನು ನಮ್ಮ ಆಫೀಸಿಗೆ ತಂದು ಒಪ್ಪಿಸತಕ್ಕದ್ದು" ಎಂದು ಬಡವರು ಕಂಗಾಲಾದರು. ಒಬ್ಬ ಅಧಿಕಾರಿ ಜಮೀನು ಮಂಜೂರು ಮಾಡಿದರೆ, ಮತ್ತೊಬ್ಬ ಅದನ್ನು ಮತ್ತೊಂದು ಕೈಯಿಂದ ಕಸಿದುಕೊಳ್ಳುವ ಅರಣ್ಯಾಧಿಕಾರಿಯು ಹರಿಜನರ ಶ್ರಮದ ಬೆವರಿನಿಂದ ಮೃದುವಾದ ಭೂಮಿಯಲ್ಲಿ ನೀಲಗಿರಿ ಸಸಿ ನೆಡಿಸಿದ ಎಂದೆಂದಿಗೂ ಬೆಳೆದು ತಿನ್ನುವ ಬಾಯಿಗಳಿಗೆ ಮಣ್ಣುಹಾಕಿದ, ಹರಿಜನರು ಮೊರೆ ಇಟ್ಟರು. ಸಂಬಂಧಪಟ್ಟ ಅಧಿಕಾರಿಗಳು, ಸರ್ಕಾರ ಅವರ ನೆರವಿಗೆ ಬರಲಿಲ್ಲ. ರೆವಿನ್ಯೂ ಅಧಿಕಾರಿಗಳು ಕೊಟ್ಟಿದ್ದ ಸಾಗುವಳಿ ಚೀಟಿಯನ್ನು ಅರಣ್ಯಾಧಿಕಾರಿ ಕಸಿದುಕೊಂಡು ಫೈಲಿಗೆ ಹಾಕಿಕೊಂಡ. ನಿಮಗೆ ಬೇರೆ ಕಡೆ ಭೂಮಿ ಕೊಡಿಸುತ್ತೇನೆಂದ ಬೇರೆ ಕಡೆ ಭೂಮಿ ಕೊಡಲಿಲ್ಲ. ಬಾಯಿಲ್ಲದ ನಿಸ್ಸಹಾಯಕಜನ ಮೂಕಶೋಕದಿಂದ ನರಳಿದರು. ಹರಿಜನರು ಸಾಗುವಳಿ ಮಾಡಬೇಕಾದ ಭೂಮಿಯಲ್ಲಿಂದು ಸರ್ಕಾರದ ನೀಲಗಿರಿ ಸಸಿ ಬೆಳೆದಿವೆ. ಆದರೂ ರೆವಿನ್ಯೂ ಅಧಿಕಾರಿಗಳು ಹರಿಜನರಿಂದ ಭೂಕಂದಾಯ ವಸೂಲಿ ಮಾಡಿದ್ದಾರೆಂಬುದಕ್ಕೆ ದಾಖಲೆಗಳಿವೆ. ●

## ಓದುಗರಿಗೆ

ನಮ್ಮ ಪತ್ರಿಕೆಯ ಕಾರ್ಯಾಲಯವನ್ನು ಮೈಸೂರಿನಿಂದ ಭದ್ರಾವತಿಗೆ ವರ್ಗಾಯಿಸಿದ್ದು ಇನ್ನುಮುಂದೆ ಪತ್ರ ವ್ಯವಹಾರ ಇತ್ಯಾದಿಗೆ ಹೊಸ ವಿಳಾಸದೊಂದಿಗೆ ವ್ಯವಹರಿಸಿ. ಇನ್ನುಮುಂದೆ ಪಂಚಮ ನಿಯಮಿತವಾಗಿ ಬರುತ್ತದೆ. ಹಳೆಯ ಚಂದಾ ಕೊಡದಿರುವವರು ಚಂದಾ ಕಳಿಸಿ ಹೊಸ ವರ್ಷಕ್ಕೂ ಚಂದಾದಾರರಾಗುವ ಮೂಲಕ ಪತ್ರಿಕೆ ನಿಯಮಿತವಾಗಿ ಬರಲು ಸಹಕರಿಸಿ. ಇನ್ನುಮುಂದೆ ಪತ್ರಿಕೆಯು ಕ್ರೌನ್ 1/2 ಆಕಾರದಲ್ಲಿ ಹೆಚ್ಚು ಪುಟಗಳೊಂದಿಗೆ ಬರುವುದರಿಂದ ಚಂದಾ ದರ ಹೆಚ್ಚಿಸಲಾಗಿದೆ,

ವಾರ್ಷಿಕ ಚಂದಾ 10 ರೂ.ಗಳು

ವ್ಯವಸ್ಥಾಪಕರು  
**ಪಂಚಮ ಪಾಕ್ಷಿಕ ದಲಿತ ಸಂಘರ್ಷ ಸಮಿತಿ**  
ಹೋಟೆಲ್ ಗಣೇಶ ಪ್ರಸಾದ್, ಹಾಲಪ್ಪ ಸರ್ಕಲ್, ಭದ್ರಾವತಿ.

ಸಂಪಾದಕ ಮತ್ತು ಪ್ರಕಾಶಕ : ರಾಮದೇವ ರಾಕೆ, ವಿಳಾಸ: ದಲಿತ ಸಂಘರ್ಷ ಸಮಿತಿ, ಭದ್ರಾವತಿ. ಮುದ್ರಣ: ಶ್ರೀ ಮಂಜುನಾಥ ಪ್ರಿಂಟರ್ಸ್. ಬಿ.ಹೆಚ್. ರಸ್ತೆ, ಭದ್ರಾವತಿ.